# Top Ten Travel Destination 2015




Singapore & Malaysia Tour



Grand Tour of USA



Dubai, Abu Dhabi & Sharjah



China Hong Kong Tour



Mount Kailash & Manasa Sarovar



Japan




Grand UK & Europe



Australia & New Zealand



Sri Lanka - Ramayana Trails



Cambodia & Thailand Tour



*We also organize Domestic & International Customized Package Tours & also offer special rates for groups and we can give presentation about the tour at the requested venue.*
















Travel & Tours
# 98, 1st Floor, D.V.G Road, Basavanagudi, Bangalore - 560 004

Contact : **9900080794, 9900080796, 9900080799, 9900080790 Tele : +91 80 2667 0647 / 2662 1983**

**E-mail : info@orchidtours.net www.orchidtours.net**

ವ್ಯವಸ್ಥಾಪಕ ಸಂಪಾದಕರು
ಸ್ವಾಮಿ ಮುಕ್ತಿದಾನಂದ
ಸಂಪಾದಕರು
ಸ್ವಾಮಿ ಜ್ಞಾನಯೋಗಾನಂದ
ನೆರವು:
ಆರ್. ಎಸ್. ಪೂರ್ಣಾನಂದ
ಎನ್. ಎಸ್. ಶಾರದಾಪ್ರಸಾದ್
ಡಾ. ಕೆ. ಎಲ್. ಪ್ರಸನ್ನಾಕ್ಷಿ
ಡಾ. ಎಚ್. ಪಾಂಡುರಂಗ ವಿಠಲ

ಅಕ್ಷರ ಜೋಡಣೆ
ಶ್ರೀರಾಮಕೃಷ್ಣ ಆಶ್ರಮ, ಮೈಸೂರು
ಮುದ್ರಣ
ಮಯೂರ್ ಗ್ರಾಫಿಕ್ಸ್, ಬೆಂಗಳೂರು

E-mail:
vivekaprabha@hotmail.com
kannada.vivekaprabha@gmail.com
Website: vivekaprabha.net
ಫೋನ್ : 9481533505

ಮುಖಪುಟ:

**ಇಳಿದು ಬಾ, ತಾಯೆ ಇಳಿದು ಬಾ!**

**ಈ ಪತ್ರಿಕೆಯ ಧ್ಯೇಯ**

'ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.'

– ಸ್ವಾಮಿ ವಿವೇಕಾನಂದ

**ಚಂದಾ ವಿವರ**

ಬಿಡಿ ಪ್ರತಿ : ₹ 14
ವಾರ್ಷಿಕ : ₹ 140
ಮೂರು ವರ್ಷ : ₹ 375
ಆಜೀವ (25 ವರ್ಷ): ₹ 3,000
ಪೋಷಕರು : ₹ 5,000 ಅಥವಾ ಹೆಚ್ಚು.

ವಿದೇಶಗಳಿಗೆ : (ಏರ್‌ಮೇಲ್)
ವಾರ್ಷಿಕ : $ 20; ಮೂರು ವರ್ಷ : $ 60
ಆಜೀವ (25ವರ್ಷ): $ 300
ಪೋಷಕರು : $ 600 ಅಥವಾ ಹೆಚ್ಚು.

ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.

ಫೆಬ್ರವರಿ-2015 ಸಂಪುಟ 16 ಸಂಚಿಕೆ 02



# ವಿವೇಕ ಪ್ರಭ

## ಪರಿವಿಡಿ





ಒಂದು ಬಾರಿ ಶ್ರೀಮಾತೆಗೆ ಶ್ರೀರಾಮಕೃಷ್ಣರು, ''ಇವರೆಲ್ಲಾ ಇಲ್ಲಿಗೆ ಬರುವುದು ಪ್ರಾಪಂಚಿಕ ವಿಷಯ ಮಾತನಾಡಲು. ಇವರು ನನ್ನನ್ನು ಕುರಿತು, 'ಈ ಮನುಷ್ಯ ಒಳ್ಳೆಯವನೇ; ಆದರೆ ರಾತ್ರಿ ತನ್ನ ಹೆಂಡತಿಯ ಜೊತೆ ಮಲಗುವುದಿಲ್ಲವಂತೆ' ಎಂದು ಮಾತನಾಡಿಕೊಳ್ಳುತ್ತಿದ್ದಾರೆ....









'ಮಗೂ, ಭರದ್ವಾಜ. ನೀನು ಈಗಿಂದೀಗಲೇ ವಾಲ್ಮೀಕಿಯ ಬಳಿಗೆ ಹೋಗು. ರಾಮನ ಉದಾತ್ತ ಕಥನವನ್ನು ಎಲ್ಲರಿಗೂ ತಿಳಿಸು ಎಂದು ಅವನನ್ನು ಬೇಡಿಕೋ. ಇದರಿಂದ ಕೇಳುಗರು ಮಾಯೆಯ ಅಂಧಕಾರದಿಂದ ಪಾರಾಗಲಿ'....





## ಪ್ರಾರ್ಥನೆ ಶ್ರೀರಾಮಕೃಷ್ಣ ಪ್ರಾತಃಸ್ಮರಣಮ್

ಪ್ರಾತಸ್ಮರಾಮಿ ಪರಿಶುದ್ಧಕುಲಾಭಿಜಾತಮ್
ಆಜನ್ಮಪುಣ್ಯಚರಿತಂ ವಿಮಲಾಂತರಂಗಮ್ ।
ಸತ್ಯಕ್ಷಮಾವಿರತಿಧೈರ್ಯದಯಾಸಮುದ್ರಂ
ಶ್ರೀರಾಮಕೃಷ್ಣಮವತಾರಶಿಖಾವತಂಸಮ್ ॥ ೧ ॥

ಅತ್ಯಂತ ಪವಿತ್ರವಾದ ಕುಲದಲ್ಲಿ ಜನಿಸಿದ, ಹುಟ್ಟಿನಿಂದಲೇ ಶುದ್ಧವಾದ ನಡತೆಯನ್ನು ಹೊಂದಿರುವ, ನಿರ್ಮಲವಾದ ಅಂತಃಕರಣವುಳ್ಳ , ಸತ್ಯ ಸಹನೆ ವೈರಾಗ್ಯ ಧೈರ್ಯ ದಯೆ ಮೊದಲಾದ ಗುಣಗಳಿಗೆ ಆಶ್ರಯರಾಗಿರುವ, ಅವತಾರಗಳಿಗೆ ಆಭರಣರಾಗಿರುವ ಶ್ರೀರಾಮಕೃಷ್ಣರನ್ನು ಬೆಳಗಿನಲ್ಲಿ ನೆನಪಿಸಿ ಕೊಳ್ಳುತ್ತೇನೆ.



ಪ್ರಾತರ್ಭಜಾಮಿ ಭುವನತ್ರಯಭದ್ರದೀಪಂ
ಯೋಗಾಧ್ವಖಿನ್ನಸುಜನವ್ರಜಮೋಕ್ಷತಲ್ಪಮ್ ।
ನಿಶ್ಶೇಷತಪ್ತಜನಚಾತಕಕಾಲಮೇಘಂ
ಶ್ರೀರಾಮಕೃಷ್ಣಮಘರಾಕ್ಷಸಕಾಲರಾತ್ರಿಮ್ ॥ ೨ ॥

ಮೂರು ಲೋಕಗಳಿಗೆ ಮಂಗಳಕರವಾದ ದೀಪವಾಗಿರುವ, ಯೋಗಮಾರ್ಗದಲ್ಲಿ ಸಾಗುತ್ತಿರುವ ಸಜ್ಜನರಿಗೆ ಮೋಕ್ಷವನ್ನು ಕರುಣಿಸುವ, ಬಾಯಾರಿಕೆಯಿಂದ ಬೆಂದ ಚಾತಕಪಕ್ಷಿಗೆ ಮೋಡ ಹೇಗೆ ತಂಪನ್ನೀಯುವುದೋ ಹಾಗೆ ಸಂಸಾರದ ಬೇಗೆಯಿಂದ ಬೆಂದ ಜನರಿಗೆ ತಂಪು ನೀಡುವ, ಪಾಪವೆಂಬ ರಾಕ್ಷಸರಿಗೆ ಕಾಳರಾತ್ರಿಯಾಗಿರುವ ಶ್ರೀರಾಮಕೃಷ್ಣರನ್ನು ಬೆಳಗಿನಲ್ಲಿ ಭಜಿಸುತ್ತೇನೆ.

ಪ್ರಾತರ್ನಮಾಮಿ ಶರಣಾಗತಕಲ್ಪವೃಕ್ಷಂ
ಕಾತ್ಯಾಯನೀಚರಣಪಂಕಜಚಂಚರೀಕಮ್ ।
ಸಂಸ್ಥಾಪಿತಾಖಿಲಸನಾತನಧರ್ಮಸೇತುಂ
ಶ್ರೀರಾಮಕೃಷ್ಣಮಪುನರ್ಭವಸಾಗರೇಂದುಮ್ ॥ ೩ ॥

ಶರಣಾಗತರಾದವರಿಗೆ ಬೇಡಿದ್ದನ್ನು ಕೊಡುವ ಕಲ್ಪವೃಕ್ಷ ಆಗಿರುವ, ದೇವಿ ದುರ್ಗೆಯ ಪಾದಕಮಲದ ದುಂಬಿಯಾಗಿರುವ, ಎಲ್ಲ ಸನಾತನ ಧರ್ಮಗಳನ್ನೂ ಒಗ್ಗೂಡಿಸುವ ಸೇತುವೆಯಾಗಿರುವ, ಮುಕ್ತಿ ಎಂಬ ಸಮುದ್ರಕ್ಕೆ ಚಂದ್ರನಾಗಿರುವ ಶ್ರೀರಾಮಕೃಷ್ಣರನ್ನು ಬೆಳಗಿನಲ್ಲಿ ನಮಿಸುತ್ತೇನೆ.

## ಸೂಕ್ತಿಪ್ರಭ ಶ್ರೀರಾಮಕೃಷ್ಣರ ಬೋಧನೆಗಳು

* ಸ್ಪರ್ಶಮಣಿಯ ಸೋಂಕಿನಿಂದ ಉಕ್ಕಿನ ಕತ್ತಿ ಚಿನ್ನದ ಕತ್ತಿಯಾಗುವುದು. ಅದಕ್ಕೆ ತನ್ನ ಹಿಂದಿನ ಆಕಾರವಿದ್ದರೂ ಮತ್ತೊಬ್ಬರಿಗೆ ಹಿಂಸೆಯನ್ನು ಕೊಡಲು ಸಾಧ್ಯವಾಗುವುದಿಲ್ಲ. ಇದರಂತೆಯೇ ಯಾರು ದೇವರ ಪಾದಕಮಲಗಳನ್ನು ಮುಟ್ಟಿರುವರೋ ಅವರ ಬಾಹ್ಯ ಆಕಾರ ಬದಲಾವಣೆಯಾಗದಿದ್ದರೂ ಅವನು ಇನ್ನೊಬ್ಬರಿಗೆ ಹಿಂಸೆಯನ್ನು ಮಾಡಲಾರ.

* ಸಹನಗುಣಕ್ಕಿಂತ ಮೇಲಾದುದಿಲ್ಲ. ಅದನ್ನು ಎಲ್ಲರೂ ಅಭ್ಯಾಸ ಮಾಡಬೇಕು. ಭಾರವಾದ ಸುತ್ತಿಗೆಯಿಂದ ಎಷ್ಟು ಪೆಟ್ಟು ಕೊಟ್ಟರೂ ಅಕ್ಕಸಾಲೆಯ ಅಡಿಗಲ್ಲು ಅಚಲವಾಗಿ ನಿಂತಿರುವುದು. ಇದರಂತೆಯೇ ಪ್ರತಿಯೊಬ್ಬರೂ ಯಾರು ಏನೇ ಮಾಡಲಿ ಅಥವಾ ಹೇಳಲಿ ಸ್ಥಿರಚಿತ್ತದಿಂದ ಅನುಭವಿಸಬೇಕು.

* ಪ್ರೇಮವೆಂದರೇನು? ಹರಿಯ ಮಧುರ ನಾಮವನ್ನು ಉಚ್ಚರಿಸುವಾಗ ಯಾವನು ಪ್ರಪಂಚವನ್ನೇ ಮರೆಯುವನೋ ಮತ್ತು ತನ್ನ ದೇಹವನ್ನೇ ಮರೆಯುವನೋ ಅದು ಪ್ರೇಮ.

* ಮನಸ್ಸೇ ಎಲ್ಲಕ್ಕೂ ಮೂಲ ಎಂಬುದನ್ನು ತಿಳಿದುಕೊಳ್ಳಿ. ಒಬ್ಬನನ್ನು ಬುದ್ಧಿವಂತನನ್ನಾಗಿ ಅಥವಾ ದಡ್ಡನನ್ನಾಗಿ ಮಾಡುವುದು, ಬಂಧನದಲ್ಲಿ ನರಳುವಂತೆ ಮಾಡುವುದು ಅಥವಾ ದುರಾತ್ಮನನ್ನಾಗಿ ಮಾಡುವುದು, ಎಲ್ಲಾ ಮನಸ್ಸು. ಯಾರ ಮನಸ್ಸು ಸದಾ ಭಗವಂತನ ಮೇಲೆ ನೆಲೆಸಿರುವುದೋ ಅವನಿಗೆ ಇನ್ನು ಯಾವ ಸಾಧನೆಯೂ ಬೇಕಿಲ್ಲ.

*('ಶ್ರೀಗುರುದೇವರ ವಚನ' ದಿಂದ)*

ಸಂಪಾದಕೀಯ

# ದಿವ್ಯತೆಯ ಹೊನಲು



## ಕಣ್ತೆರದ ಬಾಲರವಿ

ಬಾಲಕನೊಬ್ಬ ಹಸಿರು ಬಯಲಿನ ವಿಸ್ತಾರದಲ್ಲಿ ನಡೆಯುತ್ತಿದ್ದ. ಇದ್ದಕ್ಕಿದ್ದಂತೆ ಮೇಲೆ ಆಗಸದತ್ತ ನೋಡಿದ. ದಟ್ಟೈಸಿದ ಕಾರ್ಮುಗಿಲು ಎತ್ತೆತ್ತಲೂ ವ್ಯಾಪಿಸಿಕೊಂಡಿದೆ. ಒಮ್ಮೆಲೆ ಅಲ್ಲಿಗೆ ಹಾರಿಬಂತು ಬೆಳ್ಳಕ್ಕಿಗಳ ಸಾಲು; ಕಪ್ಪುಮೋಡಗಳ ಹಿನ್ನೆಲೆಯಲ್ಲಿ ಕಂಡುಬಂದ ಆ ದೃಶ್ಯ ಬಾಲಕನ ಮೈಮರೆಸಿತು. ಅವ್ಯಕ್ತ ಭಾವನೆಗಳು ಏಳತೊಡಗಿದವು. ಪ್ರಪಂಚದ ದೃಶ್ಯಗಳೆಲ್ಲ ಮರೆಯಾಗಿ ಅವನ ಮನಸ್ಸು ಅದ್ಭುತ ಆನಂದದಲ್ಲಿ ಕರಗಿಹೋಯಿತು. ಅದು ದಿವ್ಯ ಅನುಭವ; ಬಾಹ್ಯಪ್ರಪಂಚದ ಅರಿವೇ ಇಲ್ಲದೆ ಅವನು ಪ್ರಜ್ಞೆತಪ್ಪಿ ಬಿದ್ದುಬಿಟ್ಟ.

ಇದು ಗದಾಧರನ ಮೊದಲ ಸಮಾಧಿಯ ಅನುಭವ.

ಮುಂದೆ ಶ್ರೀರಾಮಕೃಷ್ಣರೆಂದು ಪ್ರಸಿದ್ಧರಾದ ಯುಗಪುರುಷನ ಬಾಲ್ಯದ ಚಿತ್ರ.

ವ್ಯಕ್ತಿಯೊಬ್ಬನ ಜೀವನದ ಗೊತ್ತುಗುರಿಗಳು ಬಾಲ್ಯದಲ್ಲಿ ಸೂಚಿತವಾಗುತ್ತದೆ ಎನ್ನುತ್ತಾರೆ. ಸಾಮಾನ್ಯ ಬದುಕಿನಲ್ಲಿ ಹೇಗೋ, ಅಸಾಧಾರಣ ವ್ಯಕ್ತಿಗಳಲ್ಲೂ ಇದನ್ನು ನಾವು ಕಾಣುತ್ತೇವೆ. ಶ್ರೀರಾಮಕೃಷ್ಣರ ಜೀವನವೆಲ್ಲ ಅಸಾಮಾನ್ಯ ಘಟನೆಗಳ ಸರಮಾಲೆ. ಅವರ ಜೀವನದ ಪ್ರತಿಯೊಂದೂ ದಿವ್ಯ, ಭವ್ಯ; ಸಾಮಾನ್ಯ ದೃಷ್ಟಿಗೆ ಅಗೋಚರವಾಗಿದ್ದರೂ, ಅಂತರಂಗದಲ್ಲೆಲ್ಲ ಅದ್ಭುತವೆನ್ನಿಸುವ ಮಹಿಮೆಯಿಂದ ಕೂಡಿದ ಘಟನೆಗಳು ಅವು. ಶ್ರೀರಾಮಕೃಷ್ಣರ ಅಸಾಧಾರಣ ವ್ಯಕ್ತಿತ್ವದ ಪ್ರಭಾವ ಅವರ ಜನನದಿಂದಲೇ ಆರಂಭವಾಯಿತು ಎಂದುಕೊಂಡರೆ ಇಲ್ಲ, ಅದಕ್ಕೂ ಮುನ್ನ ಎನ್ನಬೇಕಾಗುವುದು. ಅವರ ತಂದೆ, ತಾಯಿ ಇಬ್ಬರಿಗೂ ಅಸಾಧಾರಣ ಭಾವನೆಗಳು, ಅತ್ಯಂತ ದಿವ್ಯವೆನ್ನಬಹುದಾದ ಅನುಭವಗಳು ಆಗತೊಡಗಿದವು – ಉದಯಿಸಲಿರುವ ಮಹಾಪುರುಷನ ಮುನ್ಸೂಚನೆಯಂತೆ. ಸೂರ್ಯೋದಯಕ್ಕೆ ಮುನ್ನ ಮೂಡಣ ಆಗಸ ಕೆಂಪೇರಿ, ಹಕ್ಕಿಗಳು ಗಾನಗೈದು, ತಂಬೆಲರು ಹರಿದಾಡಿ ಸ್ವಾಗತಿಸುವಂತೆ. ಜನನದಲ್ಲೂ ಅದೆಂಥ ವಿಡಂಬನೆ, ಸಾಂಕೇತಿಕತೆ – ಹುಟ್ಟಿದೊಡನೆ ಒಲೆಯ ಬೂದಿಯಲ್ಲಿ ಮಗು ಹೊರಳಾಡಿದಂತೆ! ಸಾಕ್ಷಾತ್ ಶಿವನನ್ನೇ ನೆನಪಿಸುವಂತೆ. ಮುಂದೆ ಮಗುವಿನ ಬೆಳವಣಿಗೆಯಲ್ಲೆಲ್ಲ ಅದ್ಭುತ, ದಿವ್ಯತೆ ವ್ಯಕ್ತವಾದಂತೆ ಅನೇಕ ಸದ್ಗುಣಗಳು ಪ್ರಕಾಶಗೊಂಡವು: ಸರಳತೆ, ಪ್ರೀತಿ, ಅನುಕಂಪ, ಹಾಸ್ಯ, ಕಲಾಪೂರ್ಣತೆ, ಸತ್ಯಸಂಧತೆ, ವೈರಾಗ್ಯ ಇತ್ಯಾದಿ.

ಹಳ್ಳಿಯಲ್ಲಿ ಎಲ್ಲರೊಡನೆ ಬೆರೆತು, ಕಥೆ ಹೇಳುತ್ತ, ಹಾಡುಗಳನ್ನು ಹಾಡಿ ರಂಜಿಸುತ್ತ ಬೆಳೆದ ಬಾಲಕನಿಗೆ ಸ್ವತಂತ್ರ ಭಾವನೆಗಳಿದ್ದವು, ತನ್ನದೇ ಅಭಿಪ್ರಾಯಗಳಿದ್ದವು. 'ಅನ್ನಕ್ಕಾಗಿ ಕಲಿಸುವ ವಿದ್ಯೆ ನನಗೆ ಬೇಡ' ಎಂದು ಶಾಲೆ ಬಿಟ್ಟುಬಿಟ್ಟ ಗದಾಧರ. ಇದು ಎಲ್ಲಿಂದ ಬಂದ ತಿಳುವಳಿಕೆ? ಅಧ್ಯಾಪಕರಾಗಲಿ, ಹೆತ್ತವರಾಗಲಿ ತಿಳಿಸಲಿಲ್ಲ. ಯಾವುದು ನಿಜವಾದ ವಿದ್ಯೆ, ಯಾವುದು ತನಗೆ ಅಗತ್ಯ ಎಂಬ ವಿವೇಕ ಬಾಲಕನಲ್ಲಿ ಅಂತರ್ಗತವಾಗಿತ್ತು. ಇದೇ ರೀತಿ ಉಪನಯನದ ಸಂದರ್ಭದಲ್ಲಿ ಧನಿ ಕಮ್ಮಾರಿಣಿ ಕೈಯಿಂದ ಮೊದಲ ಭಿಕ್ಷೆ ಸ್ವೀಕರಿಸುವಂತೆ ಮಾತುಕೊಟ್ಟಿದ್ದ ಗದಾಧರ. ಕೆಳಜಾತಿಯ ಹೆಣ್ಣುಮಗಳಾದರೂ, ಜಾತಿ ಆಚಾರಗಳಿಗಿಂತ ನಿರ್ವ್ಯಾಜ ಪ್ರೀತಿ ವಾತ್ಸಲ್ಯವೇ ಹೆಚ್ಚಿನದು ಎಂಬ ತಿಳುವಳಿಕೆಯನ್ನು ಈ ಬಾಲಕ ಬೇರೆಯವರಿಂದ ಕಲಿಯಲಿಲ್ಲ. ಒಬ್ಬ ಮಹಾವ್ಯಕ್ತಿ, ಒಬ್ಬ ಅವತಾರಪುರುಷ ಬಾಲ್ಯದಲ್ಲೇ ಪರಿಪೂರ್ಣತೆಯನ್ನು ಹೊಂದಿರುತ್ತಾನೆ, ಅದರ ಸಂಪೂರ್ಣ ಅರಿವೂ ಅವನಿಗಿರುತ್ತದೆ ಎಂಬುದರ ಇಣುಕುನೋಟ ಇಲ್ಲಿ ಲಭ್ಯವಾಗುತ್ತದೆ. ಇದೇ ರೀತಿ ಸಮಾಧಿ, ಭಗವದ್ಭಾವ, ಜಗತ್ತೇ ತನ್ನದೆನ್ನುವ ಸಮದರ್ಶನ ಇವೆಲ್ಲ ಗದಾಧರನ ಅಸಾಧಾರಣ ದಿವ್ಯತೆಯನ್ನು ಸೂಚಿಸುತ್ತವೆ.

ಅಂತೆಯೇ, ಶ್ರೀರಾಮಕೃಷ್ಣರನ್ನು ಆವಾಹಿಸಿಕೊಂಡ ದಿವ್ಯಭಾವ ಅವರ ಲೌಕಿಕ ಅರಿವಿನ ಎಲ್ಲೆಯನ್ನು ಮೀರಿತ್ತು ಎಂಬುದನ್ನು ಸೂಚಿಸುವ ಘಟನೆಗಳಿವೆ. ಆನೂರು ವಿಶಾಲಾಕ್ಷಿಯ ಮಂದಿರದಲ್ಲಿ ಮೈಮರೆತು ಪ್ರಜ್ಞೆತಪ್ಪಿ ಭಾವಾವಸ್ಥೆಗೊಳಗಾದ ಬಾಲಕ ಗದಾಧರನನ್ನು ಪ್ರಸನ್ನಮಯಿ ಎಂಬ ಭಕ್ತಮಹಿಳೆಯೊಬ್ಬಳು ಮಾತ್ರ ಸರಿಯಾಗಿ ಗುರುತಿಸಿದಳು. ಇದೊಂದು ಕಾಯಿಲೆಯಲ್ಲ, ಗದಾಧರನ ಅಸಾಧಾರಣ ದಿವ್ಯಭಾವವಿದು ಎಂದು ಅವಳು ಕಂಡುಕೊಂಡಳು. ಇಲ್ಲಿ ಶ್ರೀರಾಮಕೃಷ್ಣರನ್ನೇ ದಿವ್ಯಭಾವ ಆವರಿಸಿಕೊಂಡಿತು, ಅವರ ಅರಿವು ದಿವ್ಯಭಾವದಲ್ಲಿ ಲೀನವಾಯಿತು.

ಶಿವರಾತ್ರಿಯ ದಿನ ನಾಟಕ ನಡೆಯುತ್ತಿತ್ತು. ಶಿವನ ವೇಷ ಹಾಕುವವನಿಗೆ ಅನಿವಾರ್ಯವಾಗಿ ಅಲ್ಲಿಗೆ ಬರಲಾಗಲಿಲ್ಲ; ಅಭಿನಯ ಚೆನ್ನಾಗಿ ಮಾಡಬಲ್ಲ ಹುಡುಗ ಗದಾಧರನನ್ನೇ ಶಿವನ ವೇಷಹಾಕಲು ಒಪ್ಪಿಸಿ, ಬಣ್ಣ ಹಚ್ಚಿ, ರಂಗಕ್ಕೆ ಕಳುಹಿಸಿದರು. ಅಲ್ಲಿ ಅದೆಂಥ ದೃಶ್ಯ! ಸಾಕ್ಷಾತ್ ಶಿವನೇ ಆವಿರ್ಭವಿಸಿದ್ದನ್ನು ಜನ ಕಂಡರು. ಶಿವನ ಭಾವದಲ್ಲಿ ಮೈಮರೆತ ಗದಾಧರ ಪ್ರಜ್ಞೆತಪ್ಪಿ ಬಿದ್ದುಬಿಟ್ಟ;

ನಾಟಕ ನಿಂತಿತು. ಇಲ್ಲೂ ಗದಾಧರನನ್ನು ಶಿವನ ಭಾವ ಆವರಿಸಿಕೊಂಡಿತು. ನಾಟಕ, ಪ್ರೇಕ್ಷಕ, ಸನ್ನಿವೇಶ ಎಲ್ಲವೂ ಮರೆಯಾಗಿ, ಶಿವನೊಬ್ಬನೇ ವ್ಯಾಪಿಸಿಕೊಂಡ.

ದಿವ್ಯತೆ ಎಲ್ಲಿಂದಲೋ ತಂದುಕೊಳ್ಳುವುದಲ್ಲ; ಅಂತರಂಗದ ಭಾವವೇ ಪ್ರಕಟವಾಗುವುದು – ಎಂಬ ಮಾತು ಶ್ರೀರಾಮಕೃಷ್ಣರ ಜೀವನದುದ್ದಕ್ಕೂ ಸಾಕಾರಗೊಂಡಿದೆ. ಜೀವನ ಪರ್ಯಂತ ಹೋರಾಡಿ ದಿವ್ಯತೆಯನ್ನು ಕಂಡುಕೊಳ್ಳುವ ಪರಿ ಸಾಮಾನ್ಯ ಜೀವಿಯದು; ದಿವ್ಯತೆಯನ್ನೇ ಉಸಿರಾಡುತ್ತ, ಅದನ್ನೇ ಜಗತ್ತಿಗೆ ತೋರಿಸಿಕೊಡುತ್ತ, ಮಾನವ ಬದುಕೆಂಬ ನಾಟಕವನ್ನಾಡಿ ಅದರಾಚೆಯ ದಿವ್ಯ ಅಸ್ತಿತ್ವವನ್ನು ಬೋಧಿಸುವ ಪರಿ ಶ್ರೀರಾಮಕೃಷ್ಣರದು.

### ಸಾಧನೆಯ ಕಮ್ಮಾರಸಾಲೆ

ಆರಂಭದಲ್ಲೇ ಪೂರ್ಣತೆಯನ್ನು ಕಂಡುಕೊಂಡವನಿಗೆ ಅಷ್ಟೊಂದು ಕಠೋರ ಸಾಧನೆಗಳನ್ನು ಮಾಡುವ ಅಗತ್ಯವೇನಿತ್ತು? ಎಂಬ ಪ್ರಶ್ನೆ ಸಹಜವಾಗಿಯೇ ಮೂಡುತ್ತದೆ. ಶ್ರೀರಾಮಕೃಷ್ಣರು ಇತರರಿಗೆ ಬೋಧಿಸಿದ್ದೆಲ್ಲ ಬರಿಯ ಬಾಯಿಮಾತಲ್ಲ; ತಾನು ಕಂಡದ್ದನ್ನು, ತಾನು ಅನುಭವಿಸಿದ್ದನ್ನು ಮಾತ್ರ ಅವರು ಬೋಧಿಸಿದರು. ಸ್ವತಃ ತಾನೇ ಸಾಧನೆ ಮಾಡಿ, 'ಈ ದಾರಿ ಸರಿಯಾಗಿದೆ, ಗುರಿ ತಲುಪಲು ಸುಲಭವಾಗಿದೆ; ಖಂಡಿತ ಗುರಿ ತಲುಪಬಹುದು' ಎಂದು ಅವರು ಹೇಳಿದ್ದೆಲ್ಲ ತನ್ನ ಖಚಿತತೆಗಾಗಿ ಅಥವಾ ತನ್ನ ದೃಢೀಕರಣಕ್ಕಾಗಿ ಅಲ್ಲ. ಮಾನವನಾಗಿ ಜನ್ಮವೆತ್ತಿ ಬಂದಾಗ ಮಾನವನಂತೆ ಸಕಲ ಸುಖದುಃಖಗಳನ್ನೂ, ಏರುಪೇರುಗಳನ್ನೂ ಅನುಭವಿಸುತ್ತ ಅಂತಹ ಅನುಭವಗಳ ಮೂಲಕ ಸಾಗಿ ಬಂದವನ ಕಷ್ಟ ಕೋಟಲೆಗಳನ್ನು ಅರಿಯುತ್ತ ಅದಕ್ಕೆ ಪರಿಹಾರವನ್ನೂ, ಅದನ್ನು ದಾಟುವ ಮಾರ್ಗವನ್ನೂ ಕಂಡುಕೊಂಡುದು ಜಗತ್ತಿಗೆ ದಾರಿ ತೋರಿಸುವ ಸಲುವಾಗಿ. ತಾನು ಅನುಭವಿಸಿ ತಿಳಿದಲ್ಲದೆ ಇತರರಿಗೆ ಬೋಧಿಸಲಾಗದು, ತಾನೇ ಜೀವಿಗಳ ಕಷ್ಟವನ್ನು ಕಂಡಲ್ಲದೆ ಅವುಗಳನ್ನು ಭವಸಾಗರದಿಂದ ದಾಟಿಸಲಾಗದು ಎಂಬ ಸತ್ಯವನ್ನು ಕಂಡುಕೊಂಡಿದ್ದರು ಶ್ರೀರಾಮಕೃಷ್ಣರು. 'ಅನ್ನಗತಪ್ರಾಣ'ರಾದ ಮಾನವರಿಗೆ ಸಹಜವಾಗಿ, ಸುಲಭವಾಗಿ ಶ್ರದ್ಧೆಯುಂಟಾಗದು; ಪ್ರತ್ಯಕ್ಷ ಕಂಡಲ್ಲದೆ ನಂಬದ ಜಡತ್ವ ಅವರನ್ನು ಅಡರಿಕೊಂಡಿದೆ ಎಂದು ಅವರಿಗೆ ಮನವರಿಕೆಯಾಗಿತ್ತು. ಬಹುಶಃ ಸ್ವಾಮಿ ಶಾರದಾನಂದರ 'ಶ್ರೀರಾಮಕೃಷ್ಣ ಲೀಲಾಪ್ರಸಂಗ'ದ ಸಾಧಕಭಾವದ ಅಧ್ಯಾಯಗಳಲ್ಲಿ ಇದನ್ನು ಕುರಿತು ವಿಸ್ತಾರವಾಗಿ ವಿಶ್ಲೇಷಿಸಿ ವಿವರಿಸದೆ ಇರುತ್ತಿದ್ದರೆ ಈ ಎಲ್ಲ ಸಂಗತಿಗಳು ನಮಗರ್ಥವಾಗುತ್ತಿದ್ದವೋ ಇಲ್ಲವೋ!

'ಆತ್ಮಹತ್ಯೆ ಮಾಡಲು ಒಂದು ಸೂಜಿ ಸಾಕು. ಆದರೆ ಇತರರೊಡನೆ ಹೋರಾಡಲು ಕತ್ತಿ, ಗುರಾಣಿ, ನಾನಾ ಬಗೆಯ ಶಸ್ತ್ರಾಸ್ತ್ರಗಳೆಲ್ಲ ಬೇಕು' ಎಂಬ ಶ್ರೀರಾಮಕೃಷ್ಣರ ಮಾತಿಗೆ ಅತ್ಯುತ್ತಮ ನಿದರ್ಶನ ಅವರೇ ಅಲ್ಲವೇ! ವಿದ್ಯೆಯನ್ನು ಕಲಿಯಲು ಸಾಮಾನ್ಯ ತಿಳುವಳಿಕೆ ಸಾಕು, ಆದರೆ ಇತರರಿಗೆ ಕಲಿಸಲು ವಿಶೇಷ ಜ್ಞಾನ, ಪರಿಶ್ರಮ, ಪಾಂಡಿತ್ಯ ಬೇಕು ಎಂದು ಈ ಮಾತಿನ ಅರ್ಥ. ಆಧ್ಯಾತ್ಮಿಕವಾಗಿ ನೋಡುವಾಗ, ಒಬ್ಬನಿಗೆ ತನ್ನ ಮುಕ್ತಿ ಗಳಿಸಲು ಯಾವುದಾದರೂ ಒಂದು ಮಾರ್ಗ, ಸಾಮಾನ್ಯ ಸಾಧನೆ ಸಾಕು; ಆದರೆ ಇತರರಿಗೆ ಮುಕ್ತಿ ನೀಡುವ ಗುರು ಅನೇಕ ವಿದ್ಯೆಗಳಲ್ಲಿ ಪರಿಣತನಾಗಿರಬೇಕು, ಅವನಿಗೆ ಹಲವು ಮಾರ್ಗಗಳ ತಿಳುವಳಿಕೆ ಬೇಕು ಎಂಬ ವಿಶೇಷ ಅರ್ಥವನ್ನು ಈ ಮಾತು ಸೂಚಿಸುತ್ತದೆ. ಶ್ರೀರಾಮಕೃಷ್ಣರು ಹಲವು ಸಾಧನೆಯ ಮಾರ್ಗಗಳನ್ನು ಅನುಸರಿಸಿ, ಅವುಗಳಲ್ಲೆಲ್ಲ ಪರಿಣತರಾಗಿ ಅತ್ಯಂತ ಕ್ಷಿಪ್ರವಾಗಿ ಗುರಿ ತಲುಪಿದರು. 'ಪ್ರತಿಯೊಂದು ಮಾರ್ಗವೂ ಸತ್ಯ; ಎಷ್ಟು ಮತಗಳೋ ಅಷ್ಟು ಮಾರ್ಗಗಳು' ಎಂಬ ಸತ್ಯವನ್ನು ಜಗತ್ತಿಗೆ ಸಾರಿದರು. ಜನ ನಂಬಲಿ ಎಂಬ ಕಾರಣಕ್ಕಾಗಿ ಅವರು ಪ್ರತಿಯೊಂದನ್ನೂ ಸಾಧನೆಯ ಮೂಲಕ ಅನುಭವಿಸಿದರು. ಶ್ರೀರಾಮಕೃಷ್ಣರ ಒಂದೊಂದು ಸಾಧನೆಯೂ ಬೆಚ್ಚಿಬೀಳಿಸುವಂತಹುದೆ. ಸಾಮಾನ್ಯ ವ್ಯಕ್ತಿಗಳಿಗೆ ಒಂದು ಆಧ್ಯಾತ್ಮಿಕ ಮಾರ್ಗದಲ್ಲಿ ಸಾಧನೆ ಮಾಡಿ ಗುರಿ ತಲುಪಲು ಇಡೀ ಜನ್ಮವೇ ಬೇಕಾಗಬಹುದು; ಹಲವರಿಗೆ ಒಂದು ಜನ್ಮ ಸಾಲದು. ಅಂತಹುದರಲ್ಲಿ ಸಾಂಪ್ರದಾಯಿಕ ಪೂಜಾವಿಧಾನ, ವೈಷ್ಣವ ಸಾಧನೆ, ತಂತ್ರಸಾಧನೆ, ದಾಸ್ಯ–ವಾತ್ಸಲ್ಯ– ಮಧುರ ಇತ್ಯಾದಿ ಭಾವಗಳ ಸಾಧನೆ, ವೇದಾಂತ ಸಾಧನೆ, ಇತರ ಧರ್ಮಗಳ ವಿಧಾನದಲ್ಲಿ ಸಾಧನೆ – ಪ್ರತಿಯೊಂದರಲ್ಲೂ ಅವರು ಪಡೆದ ಪರಿಪೂರ್ಣತೆ ಇಡೀ ಪ್ರಪಂಚದ ಧಾರ್ಮಿಕ ಇತಿಹಾಸದಲ್ಲೇ ಅಭೂತಪೂರ್ವ. ಈ ಸಾಧನೆಗಳ ಸರಮಾಲೆ ಆಯಾ ಮಾರ್ಗಗಳನ್ನೇ ದೃಢೀಕರಿಸುವಂತಿದೆ, ಆಯಾ ಪಂಥಗಳ ಅಸ್ತಿತ್ವವನ್ನು ಪುಷ್ಟೀಕರಿಸುವಂತಿದೆ. '**ಜನ್ಮ ಕರ್ಮ ಚ ಮೇ ದಿವ್ಯಂ**' ಎಂಬ ಗೀತೆಯ ಮಾತು ನಿಜವಾಗಿ ಅರ್ಥವಾಗುವುದು ಶ್ರೀರಾಮಕೃಷ್ಣರ ಅದ್ಭುತ ಜೀವನವನ್ನು ತಿಳಿದಾಗ.

### ತ್ಯಾಗವೆಂಬ ಸುನಾಮಿ

ಬ್ರಹ್ಮಚಾರಿಯೊಬ್ಬ ಶ್ರೀಮಾತೆ ಶಾರದಾದೇವಿಯವರನ್ನು ಕೇಳಿದ, ''ಶ್ರೀರಾಮಕೃಷ್ಣರ ಜೀವನದ ವಿಶೇಷತೆ ಇರುವುದು ಅವರ ಸರ್ವಧರ್ಮ ಸಮನ್ವಯದಲ್ಲಿ, ಅಲ್ಲವೆ?'' ಅದಕ್ಕೆ ಶ್ರೀಮಾತೆ ಉತ್ತರಿಸಿದರು: ''ಅವರು ಎಲ್ಲ ಧರ್ಮಗಳ ಸಾಧನೆಗಳ ಸಮನ್ವಯವನ್ನು ಮಾಡಿದರು ಎಂಬುದೇನೋ ನಿಜ. ಆದರೆ ಅದು ಅವರ ವಿಶೇಷತೆ ಎಂದು ನನಗನಿಸುವುದಿಲ್ಲ. ಅವರ ಜೀವನದ ವಿಶೇಷತೆ ತ್ಯಾಗದಲ್ಲಿ. ಅವರಂತೆ ತ್ಯಾಗ ಮಾಡಿದ ಉದಾಹರಣೆ ಎಲ್ಲಿದೆ? ತ್ಯಾಗವೇ ಅವರ ಭೂಷಣ.'' ಇದು ಶ್ರೀರಾಮಕೃಷ್ಣರಿಗೆ ಅವರ ಸಹಧರ್ಮಿಣಿ ನೀಡಿದ ಪ್ರಶಸ್ತಿ.

ಶ್ರೀರಾಮಕೃಷ್ಣರ ಜೀವನದ ಉದ್ದಕ್ಕೂ ಒಂದು ಪ್ರತ್ಯೇಕತೆಯನ್ನು ನಾವು ಗಮನಿಸಬಹುದು. ಎಲ್ಲರ ಜೀವನದಲ್ಲಿ ವಿದ್ಯಾಭ್ಯಾಸ, ಜೀವನ ನಿರ್ವಹಣೆ, ಕುಟುಂಬ, ಪದವಿ, ಸ್ಥಾನಮಾನಗಳು ವಿಭಿನ್ನ ಹಂತಗಳಲ್ಲಿ ಪ್ರಮುಖವೆನಿಸಿದರೆ, ಶ್ರೀರಾಮಕೃಷ್ಣರಿಗೆ ಬಾಲ್ಯದಿಂದ

ಆರಂಭಿಸಿ ಜೀವನದ ಕೊನೆವರೆಗೂ ಭಗವಂತನೊಬ್ಬನೇ ಜೀವನದ ಸರ್ವಸ್ವವಾಯಿತು. ಅವರ ಜೀವನದ ಪ್ರತಿಯೊಂದು ಕ್ರಿಯೆಯೂ ಭಗವನ್ಮುಖವಾಯಿತು. ಸಹಜವಾಗಿ ಅವರು ಎಲ್ಲವನ್ನೂ ಭಗವಂತನ ದೃಷ್ಟಿಕೋನದಿಂದ ವಿವೇಚಿಸಿ, ಯಾವುದು ಒಳಿತು, ಯಾವುದು ಕೆಡಕು; ಯಾವುದು ಸರಿ ಯಾವುದು ತಪ್ಪು ಎಂಬುದನ್ನು ನಿರ್ಣಯಿಸುತ್ತಿದ್ದರು. ಪ್ರತಿಯೊಂದಕ್ಕೂ ಅವರು ಭಗವಂತನನ್ನೇ ಆಶ್ರಯಿಸುತ್ತಿದ್ದರು. 'ತನ್ನದೇನೂ ಇಲ್ಲ, ಎಲ್ಲವೂ ಭಗವತಿಯದೇ; ಅವಳು ಆಡಿಸಿದಂತೆ ನಾನು ಆಡುತ್ತೇನೆ' ಎಂಬ ಸಮರ್ಪಣ ಭಾವದಲ್ಲಿ ಅವರ ಅಹಂಕಾರಶೂನ್ಯತೆ ಸದಾ ವ್ಯಕ್ತವಾಗುತ್ತಿತ್ತು. ಅವರು ಎಲ್ಲವನ್ನೂ ತ್ಯಜಿಸಿದರು. ಪ್ರಾಪಂಚಿಕ ಸುಖ, ಕುಟುಂಬ, ಸಂಪತ್ತು, ಕೀರ್ತಿ, ಕೊನೆಗೆ 'ತನ್ನದು' ಎನ್ನುವ ಅಹಂ ಎಲ್ಲವನ್ನೂ ತ್ಯಾಗಮಾಡಿದರು. 'ಭಗವಂತನೊಬ್ಬನೇ ಸತ್ಯ; ಸದಾ ಅವನನ್ನೇ ಆಧರಿಸಿಕೊಂಡಿರು' ಎಂಬ ಉಪದೇಶವನ್ನು ಅವರು ಎಲ್ಲರಿಗೂ ನೀಡಿದ್ದರೆ, ಅದಕ್ಕೆ ಹಿನ್ನೆಲೆಯಾಗಿ ಇದ್ದುದು ಅವರ ಜ್ವಲಂತ ಜೀವನ. ಆದ ಕಾರಣವೇ ಅವರು ಅತ್ಯುನ್ನತ ತ್ಯಾಗದ ಆದರ್ಶಮೂರ್ತಿಯಾದರು, ತ್ಯಾಗಿಗಳಿಗೆ ನಿರಂತರ ಸ್ಫೂರ್ತಿಯ ಸೆಲೆಯಾದರು.

ತ್ಯಾಗ ಮಾಡಿದಾಗಲೇ ಎಲ್ಲ ವಸ್ತುಗಳೂ ನಮ್ಮನ್ನು ಹುಡುಕಿಕೊಂಡು ಬರುವವು. ಆದರೂ ನಿಜವಾದ ತ್ಯಾಗಿ ಎಂದಿಗೂ ಅವುಗಳತ್ತ ಮುಖ ಮಾಡುವುದೇ ಇಲ್ಲ. ಇದನ್ನು ಶ್ರೀರಾಮಕೃಷ್ಣರ ಜೀವನದಲ್ಲಿ ಹಲವು ಬಾರಿ ನೋಡುತ್ತೇವೆ. ತನ್ನ ಜೀವನವೆಲ್ಲ ಜಗನ್ಮಾತೆಗೆ ಸಮರ್ಪಿಸಿದ ಬಳಿಕ ತನ್ನ ಎಲ್ಲ ಆಸೆಗಳೂ ದಗ್ಧವಾಗಿ, ತಾನು ನಿರಂತರ ಭಗವದ್ಭಾವದಲ್ಲಿರುವ ಅವಸ್ಥೆಯನ್ನು ಹೊಂದಿದರೂ, ಶ್ರೀರಾಮಕೃಷ್ಣರು ಭಗವತಿಯ ಇಚ್ಛೆಯಂತೆ ವಿವಾಹವಾದರು; ಜಗತ್ತಿಗೆ ಅದ್ಭುತ ತ್ಯಾಗದ ಪರಾಕಾಷ್ಠೆಯನ್ನು ತೋರಿಸುವ ಸಲುವಾಗಿ ತನ್ನ ಪತ್ನಿಯೊಂದಿಗೆ ಜೀವಿಸಿದರೂ, ಪ್ರಾಪಂಚಿಕ ಆಸೆಗೆ ಬಲಿಯಾಗಲಿಲ್ಲ. ಬದಲಾಗಿ, ತನ್ನ ಪತ್ನಿಯನ್ನೇ ಪೂಜಿಸುವ ಮೂಲಕ ದಿವ್ಯತೆಯ ಇನ್ನೊಂದು ಮುಖವನ್ನು ಜಗತ್ತಿಗೆ ಪರಿಚಯಿಸಿದರು. ತ್ಯಾಗ ಕೇವಲ ಸಂಸಾರತ್ಯಾಗದಿಂದ ಮಾತ್ರ ಮಾಡಬೇಕಾದದ್ದಲ್ಲ; ಸಂಸಾರದಲ್ಲೂ ಅದು ಅತ್ಯುಚ್ಚ ಆದರ್ಶ ಎಂಬುದನ್ನು ಅವರು ತೋರಿಸಿಕೊಟ್ಟರು. ಈ ಮೂಲಕ ಬಹುಪಾಲು ಜನತೆಯ ಆದರ್ಶವೂ ಆಧ್ಯಾತ್ಮಿಕತೆ-ತ್ಯಾಗದತ್ತ ಹೊರಳುವಂತೆ ಮಾಡಿದರು. ಅದರಲ್ಲೂ ವಿಶೇಷವಾಗಿ ಮಹಿಳೆಯರಿಗೆ - ಬಹುಕಾಲದಿಂದ ಸಾಂಪ್ರದಾಯಿಕ ಚೌಕಟ್ಟಿನಲ್ಲೇ ಅವಿತಿದ್ದ ಅವರ ಆಧ್ಯಾತ್ಮಿಕ ಸತ್ವ ಹೊಸ ಆದರ್ಶ ಹಾಗೂ ಶಾರದಾದೇವಿಯವರ ವ್ಯಕ್ತಿತ್ವ ಇವೆರಡರ ಸಮ್ಮುಖದಲ್ಲಿ ಪ್ರಜ್ವಲಿಸುವಂತೆ ಮಾಡಿದರು.

ಯಾರು ಏನನ್ನೂ ಬಯಸುವುದಿಲ್ಲವೋ ಅವರಿಗೆ ದ್ವೇಷ, ಅಸೂಯೆಗಳಿರದು. ಮನಸ್ಸಿನಲ್ಲಿ ರಾಗದ್ವೇಷಗಳಿಲ್ಲದ ವ್ಯಕ್ತಿ ಏರುಪೇರುಗಳಿಲ್ಲದೆ, ಪಕ್ಷಪಾತವಿಲ್ಲದೆ ಸಮದರ್ಶನವನ್ನು ಪಡೆಯಬಲ್ಲ. ಶ್ರೀರಾಮಕೃಷ್ಣರು ಇದನ್ನು ಬೋಧಿಸಿದರು; ಅವರ ಮನಸ್ಸು ಇಂತಹ ಗುಣಗಳನ್ನು ಗಳಿಸಿತು ಎನ್ನುವುದಕ್ಕೆ ಬದಲಾಗಿ, ಅವರ ಮನಸ್ಸು, ಬುದ್ಧಿ ಹಾಗೂ ಅಂತಃಕರಣಗಳೆಲ್ಲವೂ ಅವರ ದಿವ್ಯ ವ್ಯಕ್ತಿತ್ವದ ಪ್ರಕಾಶದೊಂದಿಗೆ ಸಹಜವಾಗಿ ಪ್ರಕಟಗೊಂಡವು ಎನ್ನಬೇಕು. ನಮ್ಮ ಅರಿವಿನ, ಗ್ರಹಿಕೆಯ ಮಿತಿಗಳಿಂದ ಶ್ರೀರಾಮಕೃಷ್ಣರಂತಹ ಮೇರು ವ್ಯಕ್ತಿತ್ವದ ಗುಣಲಕ್ಷಣಗಳನ್ನು ಸಮಗ್ರವಾಗಿ ನಾವು ಗ್ರಹಿಸಲಾರೆವು, ನಿಜ. ಆದರೆ ಅವರ ಗುಣಗಳ ವೈಶಿಷ್ಟ್ಯವನ್ನೇ ಅನುಸಂಧಾನ ಮಾಡುವುದರಿಂದ ಒಂದು ಲಾಭವಿದೆ: ಅವರ ವ್ಯಕ್ತಿತ್ವದ ರುದ್ರ ರಮಣೀಯ ಸಾಗರದಲ್ಲಿ ನಮ್ಮ ಚಿಕ್ಕ ಕಾಗದದ ದೋಣಿ ಮಿಂದೇಳುತ್ತ ಸಾಗುವುದು; ಒದ್ದೆಯಾದಷ್ಟೂ ಸುಖವಾಗಿ ತೇಲುವುದು.

## ಮಹಾನದಿ

ಸಚ್ಚಿದಾನಂದನೊಬ್ಬನೇ ಗುರು ಎನ್ನುತ್ತಿದ್ದರು ಶ್ರೀರಾಮಕೃಷ್ಣರು. ಸೀಮಿತ ಪ್ರಪಂಚದಲ್ಲಿ, ಪರಿಮಿತ ಬುದ್ಧಿ-ಮನಸ್ಸುಗಳ ತೊಳಲಾಟದಲ್ಲಿ ಮನುಷ್ಯ ಸತ್ಯವನ್ನು ಕಾಣಲಾರ; ಸತ್ಯವೇ ಆಗಿರುವ ಭಗವಂತ ಗುರುರೂಪಿಯಾಗಿ ಬಂದಲ್ಲದೆ ಮನುಷ್ಯ ತನ್ನ ಮಿತಿಯನ್ನು ಮೀರಿ ಮುಂದೆ ಸಾಗಲಾರ ಎಂಬ ಸಂಗತಿಗೆ ನಿದರ್ಶನವಾಗಿ ನಿಂತರು ಶ್ರೀರಾಮಕೃಷ್ಣರು. ಭಗವಂತನನ್ನು ತೋರಿಸಿಕೊಡುವವನಿಲ್ಲದೆ ಹೋದಾಗ ಜಗತ್ತು ಭಗವಂತನ ಅಸ್ತಿತ್ವವನ್ನೇ ನಿರಾಕರಿಸಿ, ನಾಸ್ತಿಕವಾದವನ್ನು ಅಪ್ಪುತ್ತದೆ. ಆಗ ಮರಳಿ ಸತ್ಯದರ್ಶನ ಮಾಡಿಸಲು, ಮಾನವನ ಮನಸ್ಸನ್ನು ಭಗವಂತನೆಡೆಗೆ ಹೊರಳಿಸಲು ಭಗವಂತ ಜನ್ಮವೆತ್ತಿ ಬರುತ್ತಾನೆ - ಇದೇ ಅವತಾರ, ಇದೇ ಜಗದ್ಗುರುವಿನ ಆವಿರ್ಭಾವ. ಶ್ರೀರಾಮಕೃಷ್ಣರ ಆವಿರ್ಭಾವದ ಹಿನ್ನೆಲೆಯಲ್ಲೂ ಇಂಥದೇ ಸನ್ನಿವೇಶವಿತ್ತು; ಅವರ ಅವತಾರದಿಂದ ಮತ್ತೆ ಧರ್ಮಸಂಸ್ಥಾಪನೆ ವ್ಯಾಪಕವಾಗಿ ನಡೆಯಿತು. ಹೀಗೆ ಗುರು-ಅವತಾರ ತತ್ತ್ವಕ್ಕೂ ಅವರ ಜೀವನ ಒಂದು ಉತ್ತಮ ಉದಾಹರಣೆಯಾಯಿತು. ಶ್ರೀರಾಮಕೃಷ್ಣರ ಹೊಸ ಉದಯದಿಂದ ಎಂಥ ಆಧ್ಯಾತ್ಮಿಕ ಅಲೆ ನವನವೀನ ಭಾವಗಳೊಂದಿಗೆ ಹೊರಹೊಮ್ಮಿತು! ಒಂದೆಡೆ ಸ್ವಾಮಿ ವಿವೇಕಾನಂದರೇ ಮೊದಲಾದ ಆಧ್ಯಾತ್ಮಿಕ ದಿಗ್ಗಜಗಳ ದಂಡು; ಇನ್ನೊಂದಡೆ ಆದಿಶಕ್ತಿಯ ಜೀವಂತ ಮೂರ್ತಿ ಶಾರದಾದೇವಿಯವರ ಆಧ್ಯಾತ್ಮಿಕ ಪ್ರಭಾವಲಯ; ರಾಮಕೃಷ್ಣ ಮಹಾಸಂಘದ ಉದಯದೊಂದಿಗೆ ವ್ಯಾಪಕಗೊಂಡ ಆಧ್ಯಾತ್ಮಿಕ ಹಾಗೂ ಸೇವಾಕಾರ್ಯಗಳ ಚಟುವಟಿಕೆ; ಬೌದ್ಧಿಕ ವಲಯದಲ್ಲೂ ವೇದಾಂತ, ವಿಜ್ಞಾನ ಇನ್ನಿತರ ದರ್ಶನಗಳ ಮರುವ್ಯಾಖ್ಯಾನ; ಸದ್ದಿಲ್ಲದೆ ಅನೇಕಾನೇಕ ಸಾಧಕರ ಬದುಕಿನಲ್ಲಿ ಪ್ರವಹಿಸತೊಡಗಿದ ಸ್ಫೂರ್ತಿಗಂಗೆ - ಇವೆಲ್ಲದರ ಆಳದಲ್ಲಿ ಗುಪ್ತಗಾಮಿನಿಯಾಗಿ ಹರಿಯುತ್ತಿದೆ ಶ್ರೀರಾಮಕೃಷ್ಣರ ದಿವ್ಯ ಜೀವನದಿ. ಸರಸ್ವತೀ ನದಿ ಭೌತಿಕವಾಗಿ ಇಂದು ಬತ್ತಿಹೋಗಿರಬಹುದು; ಆದರೆ ಆಕೆ ಜ್ಞಾನವನ್ನೇ ಜಗತ್ತಿಗೆ ಪ್ರವಹಿಸುವ ಮಾತೆ - ಆಕೆ ವಾಗಧೀಶ್ವರಿ. ಶ್ರೀರಾಮಕೃಷ್ಣರ ಭಾವ ಆಕೆಯ ಒಂದು ದಿವ್ಯ ಸೆಲೆ; ನಿರಂತರ ನಮ್ಮೊಳಗೆ ತಂಪನ್ನೆರೆಯುವ ಅಮೃತವಾಹಿನಿ ಅದು. *

# ಶಾಸ್ತ್ರಗ್ರಂಥಗಳು

✷ ಶಾಸ್ತ್ರಗಳನ್ನು ಕೇವಲ ಓದಿ ಬಿಟ್ಟರೇ ಸಾಲದು. ಕಾಮ ಕಾಂಚನಾ ಸಕ್ತಿ ಇತ್ತು ಎಂದರೆ ಶಾಸ್ತ್ರಗಳ ಮರ್ಮ ತಿಳಿದುಕೊಳ್ಳಲು ಅದು ಬಿಟ್ಟುಕೊಡುವುದಿಲ್ಲ. ಸಂಸಾರಾಸಕ್ತಿಯ ದೆಸೆಯಿಂದ ಜ್ಞಾನ ಲೋಪವಾಗಿ ಬಿಡುತ್ತದೆ.

✷ ಸಾಧನೆಯ ಅವಸ್ಥೆಯಲ್ಲಿ ಅವು ಏನು ಹೇಳುತ್ತವೆ ಎಂಬುದನ್ನು ತಿಳಿದುಕೊಳ್ಳಬೇಕಾಗು ತ್ತದೆ. ಭಗವಂತನ ಸಾಕ್ಷಾತ್ಕಾರ ದೊರೆತ ನಂತರ ಜ್ಞಾನದ ಅಭಾವವಿರದು. ಬಳಿಕ ಭಗವತಿ ಜ್ಞಾನ ರಾಶಿಯನ್ನು ನೂಕಿಕೊಡುತ್ತಲೇ ಇರುತ್ತಾಳೆ.

✷ ಮಗು ಬರೆಯಲು ಆರಂಭಿಸಿದಾಗ ಮೊದ ಮೊದಲು ಅಕ್ಷರವಾದ ಮೇಲೆ ಅಕ್ಷರವನ್ನು ನೋಡಿ ನೋಡಿ ಬರೆಯಬೇಕಾಗುತ್ತದೆ. ಆದರೆ ಕ್ರಮೇಣ ಅದು ನೀರು ಕುಡಿದ ಹಾಗೆ ಬರೆದುಕೊಂಡು ಹೋಗಿಬಿಡುತ್ತದೆ.

✷ ಚಿನ್ನ ಕರಗಿಸುವಾಗ ಬಹಳ ಚಟುವಟಿಕೆಯಿಂದ ಕೆಲಸ ಮಾಡ ಬೇಕು. ಒಂದು ಕೈಯಲ್ಲಿ ತಿದಿ, ಇನ್ನೊಂದು ಕೈಯಲ್ಲಿ ಬೀಸಣಿಗೆ, ಬಾಯಲ್ಲಿ ಊದುಕೊಳವೆ – ಚಿನ್ನ ಕರಗುವವರೆಗೆ. ಕರಗಿದ ನಂತರ ಅಚ್ಚಿಗೆ ಸುರಿದ ಒಡನೇ ನಿಶ್ಚಿಂತೆ.

✷ ಅಧಿಕವಾದ ಶಾಸ್ತ್ರಾಧ್ಯಯನ ಒಳ್ಳೆಯದನ್ನು ಮಾಡುವುದಕ್ಕೆ ಬದಲು ಹೆಚ್ಚಾಗಿ ಹಾನಿಯನ್ನೇ ತರುತ್ತದೆ. ಮೊದಲು ಶಾಸ್ತ್ರಗಳ ಸಾರ ಏನು ಎಂಬುದನ್ನು ಅರಿತುಕೊಂಡುಬಿಡಬೇಕಾಗುತ್ತದೆ. ಬಳಿಕ ಶಾಸ್ತ್ರಗ್ರಂಥಗಳ ಆವಶ್ಯಕತೆಯೇನಿರುತ್ತದೆ? ಮೊದಲು ಸಾರ ಅರಿತು, ನಂತರ ಸಾಧನೆಯ ಆಳಕ್ಕೆ ಮುಳುಗಬೇಕು.

✷ ಗೀತೆಯ ಸಾರ – ಅದನ್ನು ಒಂದು ಹತ್ತಾವರ್ತಿ ಹೇಳಿದರೆ, ಅದು ಏನಾಗಿ ಕೇಳಿಬರುತ್ತದೋ ಅದೆ. ಅಂದರೆ ಅದು 'ತ್ಯಾಗಿ', 'ತ್ಯಾಗಿ' ಎಂಬುದಾಗಿ ಕೇಳಿ ಬರುತ್ತದೆ. ಆದ್ದರಿಂದ ಗೀತೆಯ ಸಾರ: 'ಹೇ ಜೀವ, ಎಲ್ಲವನ್ನೂ ತ್ಯಾಗ ಮಾಡಿ, ಭಗವಂತನ ಸಾಕ್ಷಾತ್ಕಾರ ಕ್ಕಾಗಿ ಸಾಧನೆಯಲ್ಲಿ ತೊಡಗು' ಎಂದು.

✷ ತನ್ನನ್ನು ತಾನೇ ಕೊಂದುಕೊಳ್ಳುವುದಕ್ಕೆ ಉಗುರು ಕತ್ತರಿಸುವ ಚಾಕು ಸಾಕು. ಬೇರೆಯವರನ್ನು ಕೊಲ್ಲಬೇಕಾದರೆ ಕತ್ತಿ ಗುರಾಣಿ ಇವೆಲ್ಲಾ ಬೇಕು. ಶಾಸ್ತ್ರಗಳ ಪ್ರಯೋಜನವೂ ಇದೇ ರೀತಿಯದು.

✷ ವಿವಿಧ ಶಾಸ್ತ್ರಗಳ ಅಧ್ಯಯನ ಆವಶ್ಯಕವೇನಲ್ಲ. ವಿವೇಕ ಇಲ್ಲದೆ ಇತ್ತು ಎಂದರೆ ಕೇವಲ ಪಾಂಡಿತ್ಯ ಯಾವುದಕ್ಕೂ ಬಂದುದಲ್ಲ. ಷಟ್‌ಶಾಸ್ತ್ರಗಳನ್ನು ಅಧ್ಯಯನ ಮಾಡಿದರೂ ಏನೂ ದೊರೆಯದು. ನಿರ್ಜನಪ್ರದೇಶದಲ್ಲಿ ಗೋಪ್ಯವಾಗಿ ಅಳುತ್ತ ಅಳುತ್ತ ಭಗವಂತ ನನ್ನು ಕರೆ. ಆತ ಏನೇನು ಬೇಕೋ ಎಲ್ಲವನ್ನೂ ಮಾಡಿಕೊಟ್ಟು ಬಿಡುತ್ತಾನೆ.



✷ ಅನೇಕ ಶಾಸ್ತ್ರಗಳ ಪರಿಚಯ ಮಾಡಿಕೊಂಡಿದ್ದರೆ ಏನು ಬಂತು? ಭವನದಿಯನ್ನು ದಾಟುವುದು ಹೇಗೆ ಎಂಬುದನ್ನು ಅವಶ್ಯವಾಗಿ ಅರಿತುಕೊಳ್ಳಬೇಕು. ಭಗವಂತನೇ ವಸ್ತು, ಉಳಿದುದೆಲ್ಲಾ ಅವಸ್ತು.

✷ ಶಾಸ್ತ್ರಗಳು ಹೇಳುತ್ತವೆ, ಯಾರು ಪೂರ್ವಜನ್ಮ ಗಳಲ್ಲಿ ದಾನಾದಿ ಧರ್ಮಕಾರ್ಯಗಳನ್ನು ಮಾಡಿರುತ್ತಾರೋ ಅವರಿಗೆ ಈ ಜನ್ಮದಲ್ಲಿ ಧನ ದೊರೆಯುತ್ತದೆ ಎಂಬುದಾಗಿ. ಆದರೆ ಸತ್ಯ ಏನು ಗೊತ್ತೆ? ಈ ಮಾಯಾಪ್ರಪಂಚದಲ್ಲಿ ಅನೇಕ ಗೊಂದಲಗಳಿವೆ. ಕಾರಣ ಗೀರಣ ಏನೂ ಗೊತ್ತಾಗುವುದಿಲ್ಲ.

✷ ಭಗವಂತನ ಕಾರ್ಯವನ್ನು ಸ್ವಲ್ಪವೂ ಅರಿಯ ಲಾಗುವುದಿಲ್ಲ. ಭೀಷ್ಮ ಶರಶಯ್ಯೆಯಲ್ಲಿ ಮಲಗಿಕೊಂಡಿದ್ದಾಗ ಪಾಂಡವರು ಆತನನ್ನು ನೋಡಲು ಬಂದರು. ಅವರೊಡನೆ ಕೃಷ್ಣನೂ ಇದ್ದ. ಇದ್ದಕ್ಕಿದ್ದ ಹಾಗೆ ಭೀಷ್ಮ ಅಳಲಾರಂಭಿಸಿದ. ಪಾಂಡ ವರು ಕೃಷ್ಣನಿಗೆ ಹೇಳಿದರು: 'ಓ ಕೃಷ್ಣ, ಏನಾಶ್ಚರ್ಯ ಇದು! ಪಿತಾ ಮಹ ಅಷ್ಟವಸುಗಳಲ್ಲಿ ಒಬ್ಬ. ಇವನಂಥ ಜ್ಞಾನಿ ಈ ಜಗತ್ತಿನಲ್ಲೇ ಇಲ್ಲ. ಮೃತ್ಯು ಸನ್ನಿಹಿತವಾಗಿರುವಾಗ ಮಾಯೆಯ ದೆಸೆಯಿಂದ ಅಳುತ್ತಿದ್ದಾನಲ್ಲ!' ಕೃಷ್ಣ ಹೇಳಿದ: 'ಭೀಷ್ಮ ಅದಕ್ಕಾಗಿ ಅಳುತ್ತಿಲ್ಲ. ಅದಕ್ಕೆ ಕಾರಣವನ್ನು ಆತನನ್ನೇ ಕೇಳಿ ತಿಳಿದುಕೊಳ್ಳೋಣ.' ಕಾರಣ ಕೇಳಿದಾಗ ಭೀಷ್ಮ ಹೇಳಿದ, 'ಓ ಕೃಷ್ಣ, ಭಗವಂತನ ಕಾರ್ಯ ನನಗೆ ಸ್ವಲ್ಪವೂ ಅರ್ಥವಾಗುವುದಿಲ್ಲ. ಸಾಕ್ಷಾತ್ ಭಗವಂತನೇ ಪಾಂಡವ ರೊಡನೆ ಸರ್ವದಾ ಇದ್ದಾನೆ, ಆದರೂ ಅವರ ದುರ್ದೆಶೆಗೆ ಕೊನೆಯೇ ಇಲ್ಲವಲ್ಲ ಎಂದು. ಈ ಭಾವನೆ ಬಂದಾಗ ನನಗನಿಸು ತ್ತದೆ, ಭಗವಂತನ ಕಾರ್ಯವನ್ನು ಸ್ವಲ್ಪವೂ ಅರಿತುಕೊಳ್ಳಲಾಗು ವುದಿಲ್ಲ ಎಂದು.'

✷ ಭಗವಂತನೊಬ್ಬನೇ ಏಕಮಾತ್ರ ಅಚಲವಸ್ತು – ಸುಮೇರುವಿನ ಹಾಗೆ, ನಿರ್ಲಿಪ್ತ ಮತ್ತು ಸುಖದುಃಖಗಳಿಗತೀತ. ಆತನ ಮಾಯಾ ಕಾರ್ಯಗಳಲ್ಲಿ ಅನೇಕ ಗೊಂದಲಗಳಿವೆ. ಇದಾದ ಮೇಲೆ ಅದು, ಅದಾದ ಮೇಲೆ ಇದು ಎಂಬ ನಿಯಮ ನಿಬಂಧನೆಗಳಾವುವೂ ಇಲ್ಲ.

✷ ವೇದ, ಪುರಾಣ, ತಂತ್ರ ಎಲ್ಲಾ ಶಾಸ್ತ್ರಗಳಿಗೂ ಭಗವಂತ ನೊಬ್ಬನೇ, ಆ ಸಚ್ಚಿದಾನಂದನೊಬ್ಬನೇ ಬೇಕೇ ವಿನಾ ಬೇರೆ ಯಾರೂ ಬೇಕಾಗಿಲ್ಲ. ಯಾರನ್ನು ವೇದ 'ಸಚ್ಚಿದಾನಂದ ಬ್ರಹ್ಮ' ಎಂಬುದಾಗಿ ಕರೆಯುವುದೋ ಆತನನ್ನೇ ತಂತ್ರ 'ಸಚ್ಚಿದಾನಂದ ಶಿವ' ಎಂಬುದಾಗಿ ಕರೆಯುತ್ತದೆ. ಆತನನ್ನೇ ಪುರಾಣ ಮತ್ತೆ ಸಚ್ಚಿದಾನಂದ ಕೃಷ್ಣ ಎಂಬುದಾಗಿ ಕರೆಯುತ್ತದೆ.

✷ ಜ್ಞಾನಿಯ ಸ್ವಭಾವವೇನು? ಆತ ಶಾಸ್ತ್ರಾನುಸಾರ ನಡೆದು ಕೊಳ್ಳುತ್ತಾನೆ.

ಶ್ರೀರಾಮಕೃಷ್ಣ ವಚನವೇದ ದಿಂದ

# ಶ್ರೀರಾಮಕೃಷ್ಣರ ನೆನಪುಗಳು

ಮೂಲ: ಲಕ್ಷ್ಮೀದೇವಿ — ಅನುವಾದ : ಉಷಾ ಎಸ್.ಮೂರ್ತಿ



**ಗುರುದೇವ ಶ್ರೀ ರಾಮಕೃಷ್ಣರ ಸಮೀಪಕ್ಕೆ ಬಂದ ಅನೇಕ ಸ್ತ್ರೀ ಭಕ್ತರು ಹಾಗೂ ಆಶ್ರಿತರಲ್ಲಿ ಅವರ ಅಣ್ಣ ರಾಮಕುಮಾರರ ಮಗಳಾದ ಲಕ್ಷ್ಮೀದೇವಿಯೂ (೧೮೬೪- ೧೯೨೬) ಒಬ್ಬಳು. ಅವಳು ತಾವು ಗುರುದೇವ ಶ್ರೀ ರಾಮಕೃಷ್ಣರನ್ನು ಕಂಡಂತೆ ತಮ್ಮ ಅನಿಸಿಕೆಗಳನ್ನು ತೆರೆದಿಟ್ಟಿದ್ದಾರೆ. ಲಕ್ಷ್ಮೀದೇವಿಯು ಶ್ರೀರಾಮಕೃಷ್ಣರ ಅಣ್ಣ ರಾಮಕುಮಾರರ ಮಗಳು. ಮದುವೆಯಾದ ಸ್ವಲ್ಪ ಸಮಯದಲ್ಲೇ ವಿಧವೆಯಾದ ಇವಳು ದಕ್ಷಿಣೇಶ್ವರದಲ್ಲಿದ್ದ ತಮ್ಮ ಚಿಕ್ಕಪ್ಪ, ಚಿಕ್ಕಮ್ಮರೊಂದಿಗೆ ಇರಲು ಬಂದಳು. ಸ್ವಲ್ಪ ಸಮಯದಲ್ಲೇ ಶ್ರೀ ರಾಮಕೃಷ್ಣರ ಉಪದೇಶಗಳನ್ನೂ, ಪುರಾಣ ಕಥೆಗಳನ್ನೂ ಮನಮುಟ್ಟುವಂತೆ ಹೇಳುವ ಮೂಲಕ ಅನೇಕ ಭಕ್ತರನ್ನು ತಮ್ಮತ್ತ ಸೆಳೆದರು.**



**ಸ್ವಾಮಿ ಚೇತನಾನಂದರು ಇಂಗ್ಲಿಷ್‌ನಲ್ಲಿ ಪ್ರಕಟಿಸಿದ 'Ramakrishna As We Saw Him' ಎಂಬ ಗ್ರಂಥದಲ್ಲಿ ಸಂಗ್ರಹಿಸಲ್ಪಟ್ಟ ಈ ಲೇಖನವನ್ನು ಅನುವಾದಿಸಿದ ಲೇಖಕಿ ಮೈಸೂರು ರಾಮಕೃಷ್ಣ ಆಶ್ರಮದ ಭಕ್ತರು.**

ದಕ್ಷಿಣೇಶ್ವರದಲ್ಲಿ ನಾನು ಹಾಗೂ ಚಿಕ್ಕಮ್ಮ (ಶ್ರೀಮಾತೆ) ನಹಬತ್ (ತೋಟದ ಪಕ್ಕದಲ್ಲಿದ್ದ ಚಿಕ್ಕ ವಾದ್ಯಗಳ ಕೊಠಡಿ)ನಲ್ಲಿ ವಾಸಿಸುತ್ತಿದ್ದೆವು. ಯಾರಾದರೂ ದರ್ಶನಕ್ಕೆ ಬಂದಾಗ ಠಾಕೂರರು* ಅವರಿಗೆ ಶ್ರೀಮಾತೆಯವರ ಬಗ್ಗೆ ಹೇಳಬೇಕೆಂದಿದ್ದರೆ ತಮ್ಮ ಬೆರಳನ್ನು ಮೂಗಿನ ತುದಿಯಲ್ಲಿ ಒಂದು ವೃತ್ತದಂತೆ ಎಳೆದು ತೋರಿಸುತ್ತಿದ್ದರಂತೆ. ಏಕೆಂದರೆ ಶ್ರೀಮಾತೆಯವರು ಮೂಗುತಿ ಧರಿಸುತ್ತಿದ್ದರು. ಠಾಕೂರರು ನಹಬತ್ ಅನ್ನು ಪಂಜರಕ್ಕೆ ಹೋಲಿಸುತ್ತಿದ್ದರು. ನಮ್ಮನ್ನು ಅದರಲ್ಲಿರುವ ಶುಕ-ಸಾರಿ (ಈ ಎರಡು ಗಿಣಿಗಳು ಶ್ರೀಕೃಷ್ಣನ ಲೀಲೆಗಳ ಬಗ್ಗೆ ಮಾತನಾಡುತ್ತಿರುವಂತೆ ನಮ್ಮ ಪುರಾಣ ಕಥೆಗಳು ಹೇಳುತ್ತವೆ) ಎಂದು ಹೇಳುತ್ತಿದ್ದರು. ಭಕ್ತರು ಕಾಳೀಮಾತೆಗೆ ಅರ್ಪಿಸಿದ ಸಿಹಿತಿಂಡಿ-ಹಣ್ಣುಗಳ ಪ್ರಸಾದವನ್ನು ತಂದುಕೊಟ್ಟರೆ, ನನ್ನ ಸಹೋದರ ರಾಮಲಾಲನಿಗೆ, ''ಅಲ್ಲಿ ಪಂಜರದಲ್ಲಿ ಎರಡು ಹಕ್ಕಿಗಳಿವೆ. ಅವರಿಗೂ ಪ್ರಸಾದವನ್ನು ಕೊಡು, ಮರೆಯಬೇಡ'' ಎಂದು ಹೇಳುತ್ತಿದ್ದರು. ಹೊಸಬರಿಗೆ ನಿಜಕ್ಕೂ ಎರಡು ಹಕ್ಕಿಗಳಿವೆ ಎನ್ನಿಸುತ್ತಿತ್ತು. ಮೊದಲ ಬಾರಿ ಮಾಸ್ಟರ್ ಮಹಾಶಯರೂ ಇದು ನಿಜವೆಂದೇ ತಿಳಿದಿದ್ದರು.

ಶ್ರೀಮಾತೆಯವರನ್ನು ನೋಡಲು ಕೆಲವು ಬಾರಿ ಹಳ್ಳಿಯ ಹೆಂಗಸರು ಬರುತ್ತಿದ್ದರು. ಕೆಲವು ಬಾರಿ ಅವರಾಡುತ್ತಿದ್ದ ಮಾತುಗಳು ಠಾಕೂರರ ಕಿವಿಗೂ ಬೀಳುತ್ತಿತ್ತು. ಒಂದು ಬಾರಿ ಶ್ರೀಮಾತೆಗೆ ಶ್ರೀರಾಮಕೃಷ್ಣರು, ''ಇವರೆಲ್ಲಾ ಇಲ್ಲಿಗೆ ಬರುವುದು ಪ್ರಾಪಂಚಿಕ ವಿಷಯ ಮಾತನಾಡಲು. ಇವರು ನನ್ನನ್ನು ಕುರಿತು, 'ಈ ಮನುಷ್ಯ ಒಳ್ಳೆಯವನೇ; ಆದರೆ ರಾತ್ರಿ ತನ್ನ ಹೆಂಡತಿಯ ಜೊತೆ ಮಲಗುವುದಿಲ್ಲವಂತೆ' ಎಂದು ಮಾತನಾಡಿಕೊಳ್ಳುತ್ತಿದ್ದಾರೆ. ನೋಡು, ಈ ವಿಷಯಕ್ಕೆ ಅಷ್ಟು ಮಹತ್ವ ಕೊಡಬೇಡ. ಇವರೆಲ್ಲಾ ಪ್ರಾಪಂಚಿಕರು. ನಿನ್ನ ಮನಸ್ಸನ್ನು ಪಲ್ಲಟಮಾಡಲು ಹೇಳುತ್ತಾರೆ. ನಾನು ನನ್ನನ್ನು ಪೂರ್ತಿ ದೇವರಿಗೆ ಅರ್ಪಿಸಿಕೊಂಡಿದ್ದೇನೆ'' ಎಂದು ಹೇಳಿದರು. ಈ ಮಾತನ್ನು ಕೇಳಿ ಶ್ರೀಮಾತೆಯವರು ತುಂಬಾ ನೊಂದುಕೊಂಡು, ಠಾಕೂರರಿಗೆ ''ಇಲ್ಲ, ಇಲ್ಲ ನಾನೆಂದೂ ಅವರ ಮಾತನ್ನು ಗಣನೆಗೆ ತಂದುಕೊಳ್ಳುವುದಿಲ್ಲ. ನಿಮಗೆ ಆಶ್ವಾಸನೆ ಕೊಡುತ್ತೇನೆ'' ಎಂದರು.

ನಾವು ಹೇಗೆ ನಹಬತ್‌ನ ಆ ಚಿಕ್ಕ ಕೊಠಡಿಯಲ್ಲಿದ್ದೆವೆಂದು ಆಶ್ಚರ್ಯಪಟ್ಟಿದ್ದೇನೆ. ಇದು ಠಾಕೂರರ ಒಂದು ಪವಾಡವಿರಬಹುದು. ಸಾಧಾರಣವಾಗಿ ಅಲ್ಲಿ ನಾನು, ಶ್ರೀಮಾತೆ ಹಾಗೂ ಒಂದು ಹುಡುಗಿ ಇರುತ್ತಿದ್ದೆವು. ಆಗಾಗ ಗೋಪಾಲೇರ್‌ಮಾ

*'ಠಾಕೂರರು' ಎಂದರೆ ಬಂಗಾಳಿಯಲ್ಲಿ ಒಡೆಯ ಎಂದರ್ಥ. ಸಾಮಾನ್ಯವಾಗಿ ದೇವರನ್ನು ಆತ್ಮೀಯವಾಗಿ ಹೀಗೆ ಕರೆಯುತ್ತಾರೆ. ಶ್ರೀರಾಮಕೃಷ್ಣರನ್ನು ಎಲ್ಲರೂ 'ಠಾಕೂರರು' ಎಂದೇ ಗೌರವದಿಂದ ಕರೆಯುತ್ತಿದ್ದರು.

(ಇವರೋ ದೊಡ್ಡ ಶರೀರದವರು), ಕೊಲ್ಕತ್ತಾದಿಂದ ಬಂದ ಮಹಿಳಾ ಭಕ್ತರು ಇರುತ್ತಿದ್ದರು. ಜೊತೆಗೆ ಪಾತ್ರೆಗಳು, ದಿನಸಿ ಸಾಮಾನುಗಳು, ಬಟ್ಟೆ, ನೀರಿನ ಹಂಡೆ ಇವನ್ನೆಲ್ಲ ಇಡಬೇಕಾಗಿತ್ತು. ಠಾಕೂರರಿಗೆ ಹೊಟ್ಟೆನೋವು ಇದ್ದುದ್ದರಿಂದ ಅವರ ಪಥ್ಯದ ಅಡುಗೆಯ ಸಾಮಾನುಗಳೂ ಇರುತ್ತಿದ್ದವು.

ಶ್ರೀರಾಮಕೃಷ್ಣರು ಹೆಚ್ಚು ನಿದ್ರೆ ಮಾಡುತ್ತಿರಲಿಲ್ಲ. ನಸುಕಿನಲ್ಲೇ ಎದ್ದು, ದೇವಸ್ಥಾನದ ತೋಟದಲ್ಲಿ ತಿರುಗಾಡುತ್ತಿದ್ದರು. ಹಾಗೆ ತಿರುಗಾಡುತ್ತಿರುವಾಗ ನಹಬತ್ ಹತ್ತಿರ ಬಂದು, ''ಓ ಲಕ್ಷ್ಮೀ, ಓ ಲಕ್ಷ್ಮೀ, ಏಳು. ನಿನ್ನ ಚಿಕ್ಕಮ್ಮನನ್ನು ಎಬ್ಬಿಸು. ಎಷ್ಟು ಹೊತ್ತು ಮಲಗುತ್ತೀರಿ? ಬೆಳಗಾಗುತ್ತಾ ಬಂತು. ಹಕ್ಕಿಗಳ ಕಲರವವಾಗುತ್ತಿದೆ, ಎದ್ದು ದೇವಿಯ ಸ್ತೋತ್ರ, ಧ್ಯಾನ ಮಾಡಿ'' ಎನ್ನುತ್ತಿದ್ದರು.

ಕೆಲವು ವೇಳೆ ಚಳಿಗಾಲದಲ್ಲಿ ಠಾಕೂರರು ಕೂಗಿದರೆ, ಶ್ರೀಮಾತೆ ತಮ್ಮ ಕಂಬಳಿಯೊಳಗಿಂದಲೇ, ''ಸುಮ್ಮನಿರು, ಅವರಿಗಂತೂ ನಿದ್ದೆ ಬರುವುದಿಲ್ಲ, ಇನ್ನೂ ಬೆಳಗಾಗಿಲ್ಲ. ಹಕ್ಕಿಗಳ ಧ್ವನಿಯೂ ಕೇಳಿಸುತ್ತಿಲ್ಲ, ಉತ್ತರಿಸಬೇಡ'' ಎನ್ನುತ್ತಿದ್ದರು. ಆದರೆ ಠಾಕೂರರು ಬಾಗಿಲಿನಿಂದಲೇ ನೀರನ್ನು ಎರಚುತ್ತಿದ್ದರು. ನೀರು ನಮ್ಮ ಹಾಸಿಗೆಯ ಹತ್ತಿರ ಬಂದರೆ ಏಳಬೇಕಲ್ಲವೆ? ಕೆಲವು ಬಾರಿ ಹಾಸಿಗೆ ಒದ್ದೆಯೂ ಆಗಿ ಬಿಡುತ್ತಿತ್ತು. ವಿಪರೀತ ಉಷ್ಣದಿಂದ ಠಾಕೂರರ ತಲೆಯ ಮುಂಭಾಗದ ಕೂದಲು ಉದುರಲಾರಂಭಿಸಿತ್ತು ಮತ್ತು ಗಡ್ಡದ ಕೂದಲೂ ಬೆಳ್ಳಗಾಗ ತೊಡಗಿತ್ತು. ಠಾಕೂರರಿಗೆ ಮುದುಕರಂತೆ ಕಾಣಿಸಲು ಇಷ್ಟವಿರಲಿಲ್ಲ. ಅವರು ಶ್ರೀಮಾತೆಗೆ, ''ರಾಣಿ ರಾಸಮಣಿಯ ದೇವಸ್ಥಾನದಲ್ಲಿ ಒಬ್ಬ ಸಂನ್ಯಾಸಿ ಮುದುಕ ಇದ್ದಾನೆ ಎಂದು ಜನರು ಹೇಳುವುದು ನನಗೆ ಇಷ್ಟವಿಲ್ಲ'' ಎನ್ನುತ್ತಿದ್ದರು. ಆಗ ಶ್ರೀಮಾತೆ, ''ಹಾಗೆ ಹೇಳಬೇಡಿ. ನೀವು ಮುದುಕರಲ್ಲ, ನೀವೇನು ಈ ಪ್ರಪಂಚ ಬಿಟ್ಟು ಹೋಗುವಷ್ಟು ಮುದುಕರೆ? ಅಷ್ಟಕ್ಕೂ ಜನ ರಾಣಿ ರಾಸಮಣಿಯ ಕಾಳೀದೇಗುಲದಲ್ಲಿ ಒಬ್ಬ ಒಳ್ಳೆಯ ಸಂನ್ಯಾಸಿ ಇದ್ದಾನೆ ಎಂದು ಹೇಳಿಕೊಳ್ಳುತ್ತಾರೆ ಅಷ್ಟೆ'' ಎಂದರು. ತಕ್ಷಣ ಠಾಕೂರರು ''ಓ, ಯಾರು ನನ್ನನ್ನು ಒಳ್ಳೆಯ ಸಂನ್ಯಾಸಿ ಎನ್ನುತ್ತಾರೆ? ಆದರೂ ಯಾರಾದರೂ ನನ್ನನ್ನು ಮುದುಕ ಎಂದರೆ ನಾನು ಸಹಿಸಲಾರೆ'' ಎಂದರು.

ಮದುವೆಯಾದ ಸ್ವಲ್ಪ ಸಮಯದಲ್ಲೇ ನಾನು ವಿಧವೆಯಾಗಿ ನನ್ನ ತವರು ಮನೆ ಸೇರಿದೆ. ಆಗ ನಾನು ಸುಂದರಿಯಾದ ತರುಣಿಯಾಗಿದ್ದೆ. ಒಂದು ದಿನ ಠಾಕೂರರು ನನ್ನನ್ನು ಕರೆದು, ''ನೋಡು, ನೀನು ಆಚಾರ ಸಂಪ್ರದಾಯಗಳನ್ನು ಮನೆಯಲ್ಲೇ ಮಾಡು. ತೀರ್ಥಕ್ಷೇತ್ರಗಳಿಗೆ ಒಬ್ಬಳೇ ಹೋಗಬೇಡ. ನಿನ್ನ ಚಿಕ್ಕಮ್ಮನ (ಶ್ರೀಮಾತೆ) ಹತ್ತಿರವೇ ಇರು. ಯಾರು ಯಾವಾಗ ಏನು ಮಾಡುತ್ತಾರೋ ತಿಳಿಯದು. ಪ್ರಪಂಚದಲ್ಲಿ ಜೀವನ ಅಷ್ಟು ಸುರಕ್ಷಿತವಾಗಿರುವುದಿಲ್ಲ'' ಎಂದರು.

ಠಾಕೂರರು ಕಾಮಾರಪುಕುರದಲ್ಲಿದ್ದಾಗ ಸಂಜೆಯ ಸಮಯದಲ್ಲಿ ಬಾಗಿಲಿನ ಹತ್ತಿರ ಕುಳಿತುಕೊಳ್ಳುತ್ತಿದ್ದರು. ಆ ಊರಿನ ಹೆಂಗಸರು ನೀರು ತರಲು ಆ ಹಾದಿಯಲ್ಲೇ ಹೋಗಬೇಕಾಗಿತ್ತು. ಆ ಹೆಂಗಳೆಯರು ತಮ್ಮ ಬಿಂದಿಗೆಗಳೊಂದಿಗೇ ಠಾಕೂರರಿದ್ದಲ್ಲಿಗೆ ಬಂದು, ಅವರು ದೇವರ ಕುರಿತಾಗಿ ಹೇಳುತ್ತಿದ್ದ ಹಾಡು, ಮಾತುಗಳನ್ನು ಕೇಳುತ್ತಾ ಕುಳಿತುಬಿಡುತ್ತಿದ್ದರು. ಕಡೆಗೆ ಠಾಕೂರರೇ ಅವರುಗಳನ್ನು ಅವರ ಕೆಲಸಗಳಿಗೆ ಎಚ್ಚರಿಸಿ ಕಳುಹಿಸಬೇಕಾಗುತ್ತಿತ್ತು.

ಒಂದು ದಿನ ಠಾಕೂರರು ಒಬ್ಬ ಹುಡುಗಿಗೆ, ''ಈ ದಿನ ನೀನು ಹಾಡು ಹೇಳು, ನಾನು ಕೇಳುತ್ತೇನೆ'' ಎಂದರು. ತಕ್ಷಣ ಎಲ್ಲರೂ ನಿಶ್ಶಬ್ದರಾಗಿ ಕುಳಿತುಬಿಟ್ಟರು. ಆದರೆ ಅಲ್ಲಿ ಠಾಕೂರರಿಗೆ ಪ್ರೀತಿಪಾತ್ರಳಾದ ಒಬ್ಬ ಹುಡುಗಿ ಇದ್ದಳು. ಅವಳು ಒಂದು ದಿನ ಬರದೇ ಇದ್ದರೂ ಠಾಕೂರರು ಅವಳ ಬಗ್ಗೆ ವಿಚಾರಿಸುತ್ತಿದ್ದರು. ಯಾರೂ ಹಾಡನ್ನು ಹೇಳದೇ ಇದ್ದುದ್ದನ್ನು ನೋಡಿ ಆ ಹುಡುಗಿ ಎತ್ತರದ ಕೀರಲು ಧ್ವನಿಯಲ್ಲಿ ಹಾಡನ್ನು ಪ್ರಾರಂಭಿಸಿಯೇಬಿಟ್ಟಳು. ಎಲ್ಲರೂ ನಗಲು ಪ್ರಾರಂಭಿಸಿಬಿಟ್ಟರು. ಆದರೆ ಅವಳ ಹಾಡು ಮುಗಿದೊಡನೆಯೇ ಠಾಕೂರರು ಎಲ್ಲರಿಗೆ, ''ನೋಡಿ ಅವಳದ್ದು ಎಂಥಾ ಗಾಢವಾದ ಭಕ್ತಿ, ಶ್ರದ್ಧೆ! ನಾನು ಸುಮ್ಮನೆ ಕೇಳಿದೆ, ಆದರೂ ಅವಳು ಧೈರ್ಯದಿಂದ ಹಾಡಿದಳು. ಅವಳದ್ದು ಸತ್ಯವಾದ ಶ್ರದ್ಧೆ'' ಎಂದರು.

ಶ್ರೀರಾಮಕೃಷ್ಣರಿಗೆ ನಿರ್ಲಜ್ಜರಾದ, ಚೆಲ್ಲುಚೆಲ್ಲಾಗಿ ಆಡುವ ಹೆಂಗಸರನ್ನು ಕಂಡರೆ ಆಗುತ್ತಿರಲಿಲ್ಲ. ಅವರು ಶ್ರೀಮಾತೆಗೆ, ''ನೀನು ಅವರಂತಿರಬೇಡ. ಅವರ ವರ್ತನೆ ನಾಚಿಕೆಗೇಡು. ಹೆಂಗಸರಿಗೆ ಅಹಂಕಾರವಿರಬಾರದು. ಲಜ್ಜೆಯೇ ಅವರಿಗೆ ಆಭರಣ'' ಎನ್ನುತ್ತಿದ್ದರು.

ಕಾಮಾರಪುಕುರದಲ್ಲಿ ಶ್ರೀರಾಮಕೃಷ್ಣರಿಗೆ ಚಿನ್ನುಶಾಂಖಾರಿ ಎಂಬ ಬಾಲ್ಯದ ಗೆಳೆಯನಿದ್ದನು. ಅವನು ವಿಷ್ಣು ಭಕ್ತ. ಅವನು ಸಾಧನೆ ಮಾಡಿ ಕೆಲವು ಅಲೌಕಿಕವಾದ ಸಿದ್ಧಿಗಳನ್ನು ಪಡೆದಿದ್ದನು. ಅವನು ಠಾಕೂರರನ್ನು ಹಿಡಿದುಕೊಂಡು, ''ಗದಾಯ್ ನಿನ್ನನ್ನು ನೋಡಿದರೆ ನನಗೆ ಗೌರಾಂಗನ ನೆನಪು ಬರುತ್ತದೆ'' ಎನ್ನುತ್ತಿದ್ದನು. ಕೆಲವು ಅಕ್ಕಪಕ್ಕದ ಮನೆಯವರು ಗಂಗಾಸ್ನಾನಕ್ಕಾಗಿ ದಕ್ಷಿಣೇಶ್ವರಕ್ಕೆ ಬಂದಾಗ ಠಾಕೂರರಿಗೆ ಚಿನ್ನುಶಾಂಖಾರಿಯ ಅಲೌಕಿಕ ಸಿದ್ಧಿಯ ಬಗ್ಗೆ ಹೇಳುತ್ತಿದ್ದರು. ಅದರಲ್ಲಿನ ಒಂದು ಘಟನೆ ಹೀಗಿದೆ: ಒಂದು ದಿನ ಚಿನ್ನುಶಾಂಖಾರಿಯ ಮನೆಗೆ ಕೆಲವು ಅತಿಥಿಗಳು ಬಂದಿದ್ದರು. ಅವರಿಗೆ ಮಾವಿನ ಜೊತೆಗೆ ಮೀನು ಹಾಕಿ ಮಾಡಿದ ಪದಾರ್ಥ ಇಷ್ಟವೆಂದು ತಿಳಿಯಿತು. ಆಗ ಮಾವಿನಕಾಯಿಯ ಕಾಲವಾಗಿರಲಿಲ್ಲ. ಚಿನ್ನುವಿಗೆ ಬಹಳ ಬೇಸರವಾಯಿತು. ಅವನು ದೇವರ ಧ್ಯಾನ ಮಾಡಿ ತನ್ನ ಅತಿಥಿಗಳ ಬೇಡಿಕೆಯನ್ನು ಈಡೇರಿಸಬೇಕೆಂದು ಪ್ರಾರ್ಥಿಸಿದ. ಕೊನೆಗೆ, ನಿರೀಕ್ಷೆ ಇಲ್ಲದಿದ್ದರೂ ಕೂಡ ಆಶ್ಚರ್ಯಕರವಾದ ರೀತಿಯಲ್ಲಿ ಕೆಲವು ಮಾವಿನಕಾಯಿಗಳು ಸಿಕ್ಕಿದವು. ಅವನು ಅದರ ಅಡುಗೆ ಮಾಡಿಸಿ, ಅತಿಥಿಗಳಿಗೆ ಬಡಿಸಿ ತೃಪ್ತಿಪಡಿಸಿದ.

ಆ ಕಥೆಯನ್ನು ಕೇಳಿದ್ದ ಠಾಕೂರರು ಕಾಮಾರಪುಕುರಕ್ಕೆ ಹೋದಾಗ ಚಿನ್ನುವಿಗೆ ''ಛಿ, ಛಿ, ನಾಚಿಕೆಯಾಗಬೇಕು ನಿನಗೆ, ನಿನ್ನ ಅಲೌಕಿಕ

ಸಿದ್ಧಿಯನ್ನು ಕಿತ್ತು ಒಗೆ, ಮತ್ತೆ ಅದನ್ನು ಉಪಯೋಗಿಸ ಬೇಡ, ಜನರು ನಿನ್ನನ್ನು ಹಾಳುಮಾಡುತ್ತಾರೆ, ಇದು ನಿನ್ನ ಆಧ್ಯಾತ್ಮಿಕ ಜೀವನಕ್ಕೇ ತೊಂದರೆ ಮಾಡುತ್ತದೆ, ನೀನು ಈ ಶಕ್ತಿಗೆ ದಾಸನಾಗಬೇಡ. ಅದರಿಂದ ನಿನ್ನ ಮನಸ್ಸು ಅಧೋಗತಿಗೆ ಇಳಿಯುತ್ತದೆ'' ಎಂದರು.

ಠಾಕೂರರು ಪುರೀಕ್ಷೇತ್ರವನ್ನು ಎಂದೂ ಸಂದರ್ಶಿಸಲಿಲ್ಲ. ಒಂದು ದಿನ ಬಲರಾಮ ಬಸು, ಪುರೀಕ್ಷೇತ್ರದ ಜಗನ್ನಾಥ ದೇವಾಲಯದ ಪ್ರಸಾದ ತಂದಿದ್ದರು. ಠಾಕೂರರು ಪ್ರಸಾದಕ್ಕೆ ತಲೆ ಸೋಕಿಸಿ, ದೇವರಿಗೆ ನಮಸ್ಕರಿಸಿದರು. ಅವರು ತಕ್ಷಣ ಭಾವಾವಿಷ್ಟರಾಗಿಬಿಟ್ಟರು. ಸ್ವಲ್ಪ ಸಮಯದ ನಂತರ ಸಹಜ ಸ್ಥಿತಿಗೆ ಬಂದು, ''ನಾನು ಜಗನ್ನಾಥನ ಸನ್ನಿಧಿಗೆ ಹೋಗಿದ್ದೆ, ಅಲ್ಲಿ ಎಲ್ಲವೂ ವಿಶಾಲ ಹಾಗೂ ಉತ್ಕೃಷ್ಟವಾಗಿದೆ. ಅಗಲವಾದ ರಸ್ತೆಗಳು, ವಿಸ್ತಾರವಾದ ಸಮುದ್ರ ಇವೆ. ಆದರೆ ಈ ದೇಹ ಅಲ್ಲಿಗೆ ಹೋದರೆ ಮತ್ತೆ ಹಿಂತಿರುಗಿ ಬರುವುದಿಲ್ಲ'' ಎಂದರು.

ನಾನು ಚಿಕ್ಕಮ್ಮ ಶ್ರೀಮಾತೆಯವರೊಡನೆ ದಕ್ಷಿಣೇಶ್ವರದಲ್ಲಿದ್ದೆ. ಠಾಕೂರರು ತಮ್ಮ ನಾಲಿಗೆಯ ಮೇಲೆ ಒಂದು ಮಂತ್ರವನ್ನು ಬರೆದರೆಂದು ಶ್ರೀಮಾತೆ ಒಂದುದಿನ ಹೇಳಿದರು. 'ನೀನೂ ನಾಲಿಗೆಯ ಮೇಲೆ ಮಂತ್ರವನ್ನು ಬರೆಸಿಕೊಳ್ಳಲು ಠಾಕೂರರನ್ನು ಕೇಳು' ಎಂದು ಅವರು ನನಗೆ ಸಲಹೆ ನೀಡಿದರು. ನಾನು, ''ನನಗೆ ಬಹಳ ನಾಚಿಕೆಯಾಗುತ್ತದೆ. ಅವರ ಕೊಠಡಿಯಲ್ಲಿ ಯವಾಗಲೂ ಬಹಳ ಜನ ಭಕ್ತರಿರುತ್ತಾರೆ'' ಎಂದೆ.

ಬೇರೊಂದು ದಿನ ನಾನು ಠಾಕೂರರಿಗೆ ನಮಸ್ಕರಿಸಲು ಹೋಗಿ, ಸುಮ್ಮನೆ ನಿಂತಿದ್ದೆ. ಠಾಕೂರರು ತಾವೇ, ''ನಿನಗೆ ಯಾವ ದೇವರನ್ನು ಕಂಡರೆ ಬಹಳ ಇಷ್ಟ?'' ಎಂದರು. ಅವರ ಪ್ರಶ್ನೆಯಿಂದ ಸಂತೋಷಗೊಂಡು 'ರಾಧಾಕೃಷ್ಣ' ಎಂದು ಹೇಳಿದೆ. ನಂತರ ಅವರು ನನ್ನ ನಾಲಿಗೆಯ ಮೇಲೆ ಮಂತ್ರವನ್ನು ಬರೆದರು. ಕಾಮಾರಪುಕುರದ ಪ್ರಸನ್ನ ಅಕ್ಕ ನನಗೆ ಬಹಳ ಪ್ರೀತಿಯಿಂದ ಕೊಟ್ಟಿದ್ದ ತುಳಸೀಮಾಲೆ ನನ್ನ ಹತ್ತಿರ ಇತ್ತು. ಸ್ವಲ್ಪ ಹಿಂದೆ ನನಗೂ ಶ್ರೀಮಾತೆಯವರಿಗೂ ಜಗನ್ಮಾತೆಯನ್ನು ಪೂಜಿಸುವ ಬಗ್ಗೆ ಸ್ವಾಮಿ ಪೂರ್ಣಾನಂದರಿಂದ ಕೆಲವು ಸೂಚನೆಗಳು ಸಿಕ್ಕಿದ್ದವು. ಪೂರ್ಣಾನಂದರು ಸರಳ, ಶಾಂತ, ಸುಂದರ ವ್ಯಕ್ತಿಯಾಗಿದ್ದರು. ಈ ಬಗ್ಗೆ ಶ್ರೀಮಾತೆ ಠಾಕೂರರಲ್ಲಿ ಪ್ರಸ್ತಾಪಿಸಿದಾಗ ಅವರು, ''ಸರಿಯಾಗಿದೆ. ನಾನು ಲಕ್ಷ್ಮಿಗೆ ಸರಿಯಾದ ಮಂತ್ರವನ್ನೇ ಕೊಟ್ಟಿದ್ದೇನೆ'' ಎಂದರು.

ನಾನು ದಕ್ಷಿಣೇಶ್ವರದಲ್ಲಿದ್ದಾಗ ಕೆಲವು ಬಾರಿ ನಮ್ಮ ಮನೆದೇವತೆಯಾದ ಶೀತಲಾದೇವಿಯನ್ನು ಜ್ಞಾಪಿಸಿಕೊಳ್ಳುತ್ತಿದ್ದೆ. ಆ ಸಮಯದಲ್ಲಿ ಠಾಕೂರರಿಗೆ ಯಾರಾದರೂ ಸಿಹಿತಿಂಡಿಯನ್ನು ಅರ್ಪಿಸಿದಾಗ ಅವರು, ''ಇದನ್ನು ಲಕ್ಷ್ಮಿಗೆ ತಿನ್ನಿಸಿ, ಯಾಕೆಂದರೆ ಅವಳು ಶೀತಲಾದೇವಿಯ ಒಂದು ಅಂಶವಾಗಿದ್ದಾಳೆ'' ಎನ್ನುತ್ತಿದ್ದರು. ಹೀಗೆ ಮಾಡೆಂದು ಅವರು ಒಮ್ಮೆ ಗಿರೀಶಬಾಬುವಿಗೂ ಹೇಳಿದ್ದರು.

ಠಾಕೂರರ ಕೊಠಡಿಯಲ್ಲಿ ಭಜನೆ ಆಗುತ್ತಿದ್ದಾಗ, ಅವರು ನನ್ನ ಸಹೋದರ ರಾಮಲಾಲನಿಗೆ, ''ನಹಬತ್ ಕಡೆ ಇರುವ ಬಾಗಿಲನ್ನು ತೆರೆದಿಡು, ಭಕ್ತಿಯ ಅಲೆ ಅಲ್ಲಿಗೂ ಹರಿಯಲಿ. ಇದನ್ನು ನೋಡದೆ, ಕೇಳದೆ ಇದ್ದರೆ ಅವರಿಗೆ (ಲಕ್ಷ್ಮಿ, ಶ್ರೀಮಾತೆ) ಇದೆಲ್ಲ ತಿಳಿಯುವುದಾದರೂ ಹೇಗೆ?'' ಎನ್ನುತ್ತಿದ್ದರು. ಕೆಲವು ಬಾರಿ ಶ್ರೀಮಾತೆ ಬಿದಿರಿನ ತಡಿಕೆಯ ಸಣ್ಣ ಕಂಡಿಯ ಮೂಲಕ ನೋಡಿ ಸಂತೋಷಪಟ್ಟಿದ್ದುಂಟು. ತಮಾಷೆಯಾಗಿ ಕೆಲವು ಸಲ ಠಾಕೂರರು, ''ರಾಮಲಾಲ ನೋಡಲ್ಲಿ – ನಿನ್ನ ಚಿಕ್ಕಮ್ಮನ ತಡಿಕೆಯ ತೂತು ದೊಡ್ಡದಾಗುತ್ತಿದೆ'' ಎನ್ನುತ್ತಿದ್ದರು.

ಠಾಕೂರರು ಹಲವು ಸಲ ನನಗೂ, ಶ್ರೀಮಾತೆಯವರಿಗೂ ರಾಮಾಯಣ, ಮಹಾಭಾರತದ ಕಥೆಗಳನ್ನು ಹೇಳುತ್ತಿದ್ದುಂಟು. ಅದರಲ್ಲಿ ಬರುವ ನಳದಮಯಂತಿ ಮುಂತಾದ ಕಥೆಗಳನ್ನು ಸ್ವಾರಸ್ಯವಾಗಿ ವರ್ಣಿಸುತ್ತಿದ್ದರು. ನಂತರ ಅವರು ನಮಗೆ ಕಥೆ ಅರ್ಥವಾಗಿದೆಯೋ ಇಲ್ಲವೋ ಎಂದು ಪ್ರಶ್ನೆ ಮಾಡುತ್ತಾ, ನನ್ನಿಂದ ಮತ್ತೆ ಕಥೆ ಹೇಳಿಸಿ ಸಮಾಧಾನಪಡುತ್ತಿದ್ದರು. ನಂತರ, 'ಇದರಿಂದಲೇ ನಾನು ನಿನ್ನನ್ನು ಗಿಣಿ (ಶುಕ) ಎಂದು ಕರೆಯುತ್ತೇನೆ' ಎನ್ನುತ್ತಿದ್ದರು.

ಚಿಕ್ಕಪ್ಪ (ಠಾಕೂರರು) ನಮ್ಮನ್ನು ಆಧ್ಯಾತ್ಮಿಕ ಸಾಧನೆ ಮಾಡಲು ಪ್ರೋತ್ಸಾಹಿಸುತ್ತಿದ್ದರು. ಅವರು, ''ಯಾವಾಗಲೂ ಸತ್ಯವಂತರಾಗಿರಿ, ಸರಳವಾಗಿರಿ, ಶುದ್ಧರಾಗಿರಿ. ನಿಮ್ಮ ಆಧ್ಯಾತ್ಮಿಕ ನಿಯಮಗಳನ್ನು ಯಾರ ಮುಂದೆಯೂ ಪ್ರದರ್ಶಿಸಬೇಡಿ'' ಎನ್ನುತ್ತಿದ್ದರು. ''ನಡತೆ ಶುದ್ಧವಾಗಿಲ್ಲದೆ ಜಪ ಮಾಡಿದರೆ ಏನು ಒಳ್ಳೆಯದಾಗುತ್ತದೆ? ಹೆಣ್ಣು ಮಕ್ಕಳು ಎಚ್ಚರಿಕೆಯಿಂದಿರಬೇಕು. ಶುದ್ಧರಾಗಿರಿ, ಮರಗಳು ಭೂಮಿಯಿಂದ ಬೇರುಗಳ ಮೂಲಕ ನೀರನ್ನು ತೆಗೆದುಕೊಳ್ಳುವಂತೆ, ತತ್ತ್ವಜ್ಞಾನವಿಲ್ಲದ ಕೆಲವರು ಹೊರಜಗತ್ತಿಗೆ ಸಂಪ್ರದಾಯಸ್ಥರಂತೆ ಕಂಡು ಬಂದರೂ, ಒಳಗಡೆ ಪ್ರಾಪಂಚಿಕ ವಿಷಯಗಳಲ್ಲಿ ಆಸಕ್ತರಾಗಿರುತ್ತಾರೆ. ಬೂಟಾಟಿಕೆ ಬೇಡ'' ಎಂದೂ ಅವರು ಹೇಳುತ್ತಿದ್ದರು.

ಒಂದು ಬಾರಿ ಅವರು ನನಗೆ ಹೇಳಿದರು: ''ನಿನಗೆ ದೇವರನ್ನು ಸ್ಮರಿಸಲು ಸಾಧ್ಯವಾಗದಿದ್ದರೆ ನನ್ನನ್ನು ನೆನೆ, ಅಷ್ಟೇ ಸಾಕು.''

ಶ್ರೀರಾಮಕೃಷ್ಣರಿಗೆ ಜೀವನ ಪೂರ್ತಿ ಹೊಟ್ಟೆನೋವಿನ ತೊಂದರೆ ಇತ್ತು. ನನ್ನ ಅಜ್ಜಿ (ಠಾಕೂರರ ತಾಯಿ) ದಕ್ಷಿಣೇಶ್ವರದಲ್ಲಿದ್ದಾಗ ಠಾಕೂರರು ಅವರಿಗೆ ಪ್ರತಿದಿನ ಬೆಳಗ್ಗೆ ನಮಸ್ಕರಿಸುತ್ತಿದ್ದರು. ಅಜ್ಜಿಯದು ಎತ್ತರವಾದ, ಸುಂದರವಾದ ದೇಹ. ಅವರು ಸಂಪ್ರದಾಯಸ್ಥರು ಮತ್ತು ಲಜ್ಜಾಸ್ವಭಾವದವರಾಗಿದ್ದರು. ಅವರು ತಮ್ಮ ಚಿಕ್ಕ ಮಗನೆದುರಿಗೂ ಸೆರಗಿನಿಂದ ತಮ್ಮ ಮುಖವನ್ನು ಮುಚ್ಚಿಕೊಳ್ಳುತ್ತಿದ್ದರು. ಠಾಕೂರರು ಬಂದಾಗಲೆಲ್ಲಾ, ''ಮಗು, ನಿನ್ನ ಹೊಟ್ಟೆನೋವು ಹೇಗಿದೆ?'' ಎಂದು ಕೇಳುತ್ತಿದ್ದರು. ಮಗ, 'ಅಷ್ಟೇನೂ ಸರಿಯಾಗಿಲ್ಲ' ಎನ್ನುತ್ತಿದ್ದರು. ''ಕಾಳೀಮಾತೆಯ ಪ್ರಸಾದ ತೆಗೆದುಕೊಳ್ಳಬೇಡ, ಅದಕ್ಕೆ ತುಂಬಾ ಮಸಾಲೆ ಹಾಕುತ್ತಾರೆ. ನಿನ್ನ ಹೊಟ್ಟೆನೋವು

ವಾಸಿಯಾಗುವವರೆಗೂ, ನಿನ್ನ ಹೆಂಡತಿ ಮಾಡಿದ ಸಪ್ಪೆ ಊಟವನ್ನೇ ತಿನ್ನು'' ಎನ್ನುತ್ತಿದ್ದರು.

ಕೆಲವು ಸಲ ಈ ಸಪ್ಪೆ ಆಹಾರ ತಿಂದು ಠಾಕೂರರಿಗೆ ಬೇಸರ ವಾದಾಗ, ''ಅಮ್ಮ ನೀನು ಕಾಮಾರಪುಕುರದಲ್ಲಿದ್ದಾಗ ಮಾಡುತ್ತಿದ್ದಂತೆ ಒಂದೆರಡು ರುಚಿಯಾದ ಅಡಿಗೆ ಮಾಡಮ್ಮ'' ಎನ್ನುತ್ತಿದ್ದರು. ಹಾಗಾಗಿ ಕೆಲವು ಸಲ ಅಜ್ಜಿ ಅವರಿಗಾಗಿ ಬೇರೆ ಅಡಿಗೆ ಮಾಡುತ್ತಿದ್ದರು. ಅದನ್ನು ಸಂತೋಷದಿಂದ ಠಾಕೂರರು ಊಟ ಮಾಡುತ್ತಿದ್ದರು.

ಠಾಕೂರರು ಹೆಂಗಸರನ್ನು ಅಡಿಗೆ ಕೆಲಸ ಮಾಡಲು ಪ್ರೋತ್ಸಾಹಿಸುತ್ತಿದ್ದರು. ''ಅದು ಮೆದುಳಿಗೆ ಒಳ್ಳೆಯ ಕೆಲಸ ಕೊಡುತ್ತದೆ. ಸೀತಾ, ದ್ರೌಪದಿ, ಪಾರ್ವತಿ, ಲಕ್ಷ್ಮೀ ಮುಂತಾದವರು ಕೂಡ ತಾವೇ ಅಡಿಗೆ ಮಾಡುತ್ತಿದ್ದರು'' ಎಂದು ಹೇಳುತ್ತಿದ್ದರು.

ತಮ್ಮ ಇಬ್ಬರು ಹಿರಿಯ ಮಕ್ಕಳನ್ನು ಕಳೆದುಕೊಂಡ ನಂತರ ಅಜ್ಜಿ ತುಂಬಾ ಅನಾಸಕ್ತರೂ, ದುಃಖಿಯೂ ಆಗಿದ್ದರು. ಇದಕ್ಕಿಂತಲೂ ಮುಖ್ಯವಾಗಿ, ಅಲಂಬಜಾರಿನ ಸೆಣಬಿನ ಕಾರ್ಖಾನೆಯ ಮಧ್ಯಾಹ್ನದ ಸೀಟಿಯನ್ನು (ಸೈರನ್) ಕೇಳುವ ತನಕ ಊಟ ಮಾಡುತ್ತಿರಲಿಲ್ಲ. ಸೀಟಿಯ ಶಬ್ದ ಕೇಳಿದೊಡನೆ, ''ಇದು ನಾರಾಯಣನಿಗೆ ಲಕ್ಷ್ಮಿ ಊಟ ಬಡಿಸುವ ಸಮಯ, ದೇವಲೋಕದಿಂದ ಬರುವ ಶಬ್ದ'' ಎನ್ನುತ್ತಿದ್ದರು. ಆದರೆ ಭಾನುವಾರದಂದು ಕಾರ್ಖಾನೆಗೆ ರಜೆ ಇರುತ್ತಿದ್ದ ಕಾರಣ ಮಧ್ಯಾಹ್ನದ ಸೀಟಿ ಕೇಳುತ್ತಿರಲಿಲ್ಲ. ಆ ದಿನ ಅಜ್ಜಿ ಊಟವೇ ಮಾಡುತ್ತಿರಲಿಲ್ಲ. ಇದು ಠಾಕೂರರಿಗೆ ಚಿಂತೆಯನ್ನುಂಟು ಮಾಡಿತು. ''ಏನು ಮಾಡಲಿ, ನನ್ನ ಮುದಿತಾಯಿ ಈ ದಿನ ಊಟ ಮಾಡುವುದಿಲ್ಲ, ಮೊದಲೇ ನಿಶ್ಶಕ್ತಳಾಗಿದ್ದಾಳೆ'' ಎನ್ನುತ್ತಿದ್ದರು. ಆಗ ಹೃದಯ, ''ಯೋಚನೆ ಮಾಡಬೇಡಿ ಚಿಕ್ಕಪ್ಪ, ಅಜ್ಜಿಗೆ ಯಾವಾಗ ಹಸಿವೆ ಆಗುತ್ತದೋ ಆಗ ಅವಳೇ ಊಟ ಮಾಡುತ್ತಾಳೆ'' ಎಂದ. ಠಾಕೂರರು, ''ಇಲ್ಲ , ನಾನು ಅವರ ಮಗ, ವಯಸ್ಸಾದ ತಾಯಿಯನ್ನು ನೋಡಿಕೊಳ್ಳುವುದು ನನ್ನ ಕರ್ತವ್ಯ'' ಎಂದು, ಬಹಳ ಪುಸಲಾಯಿಸಿ ತಮ್ಮ ತಾಯಿಗೆ ಶ್ರೀಕೃಷ್ಣನ ಪ್ರಸಾದವನ್ನು ತಿನ್ನಿಸುವುದರಲ್ಲಿ ಯಶಸ್ವಿಯಾಗುತ್ತಿದ್ದರು.

ಒಂದು ದಿನ ಹೃದಯ ಒಂದು ಕೊಳವೆಯನ್ನು ತಂದು ಊದಿ ದೊಡ್ಡ ಶಬ್ದ ಮಾಡಿ ಅಜ್ಜಿಗೆ, ''ನೋಡು ದೇವಲೋಕದ ಸೀಟಿ, ಕೇಳಿದೆಯಾ? ಈಗ ನೀನು ಊಟ ಮಾಡು'' ಎಂದ. ಆದರೆ ಅಜ್ಜಿ ನಕ್ಕು, ''ನೀನು ಕೊಳವೆಯಿಂದ ಊದಿ ಶಬ್ದ ಮಾಡಿದೆ'' ಎಂದು ನಕ್ಕಳು. ಉಳಿದವರೆಲ್ಲರೂ ನಕ್ಕರು.

ಅಜ್ಜಿ ತೀರಿಕೊಂಡಾಗ ಠಾಕೂರರು ಬಹಳ ದುಃಖಪಟ್ಟರು. ಶ್ರೀಮಾತೆಯವರು ಠಾಕೂರರಿಗೆ ಊಟವನ್ನು ಅವರ ಕೊಠಡಿಗೇ ಕೊಂಡೊಯ್ಯುತ್ತಿದ್ದರು. ಕೆಲವು ಬಾರಿ ಠಾಕೂರರು, ಶ್ರೀಮಾತೆಯವರನ್ನು ಕುರಿತು ತಮಾಷೆಯಾಗಿ, ''ಅದೃಷ್ಟವಶಾತ್ ನಾನು ಈ ಮರದ (ಶ್ರೀಮಾತೆ) ನೆರಳಿನಲ್ಲಿದ್ದೇನೆ; ಇಲ್ಲವಾದರೆ ಯಾರು ನನಗೆ ಊಟವನ್ನು ನೀಡುವವರು? ಯಾವ ಮನುಷ್ಯ ತನ್ನ ಬಟ್ಟೆಯನ್ನೇ ಸರಿಯಾಗಿ ಇಟ್ಟುಕೊಳ್ಳಲಾರನೋ ಅವನು  ಮದುವೆಯಾಗಿದ್ದಾನಲ್ಲವೆ?'' ಎನ್ನುತ್ತಿದ್ದರು.

ಒಂದು ದಿನ ನಾನು ಶ್ರೀಮಾತೆಯವರೊಂದಿಗೆ ಠಾಕೂರರಿಗೆ ಊಟವನ್ನು ಕೊಡಲು ಹೋದೆ. ಅಲ್ಲಿ ರಾಖಾಲ ಮತ್ತು ಕೆಲವರು ಇದ್ದವರು ನಮ್ಮನ್ನು ನೋಡಿದ ತಕ್ಷಣ ಹೊರಗೆ ಹೊರಟು ಹೋದರು. ಠಾಕೂರರು ಸಮಾಧಿಯ ಸ್ಥಿತಿಯಲ್ಲಿ ಹಾಸಿಗೆಯಲ್ಲಿ ಮಲಗಿದ್ದರು. ಆದರೆ ಅವರ ದೃಷ್ಟಿ ಶೂನ್ಯದಲ್ಲಿ ನೆಟ್ಟಿತ್ತು. ಶ್ರೀಮಾತೆಯವರು ಠಾಕೂರರ ಆರೋಗ್ಯದ ಬಗ್ಗೆ ತುಂಬಾ ಕಾಳಜಿ ವಹಿಸುತ್ತಿದ್ದರು, ಇದನ್ನು ನೋಡಿದ ಕೂಡಲೇ ಅವರು ದೇಹತ್ಯಾಗ ಮಾಡಿಬಿಟ್ಟಿದ್ದಾರೆಂದು ಜೋರಾಗಿ ಅಳುವುದಕ್ಕೆ ಪ್ರಾರಂಭಿಸಿದರು. ಆಗ ಠಾಕೂರರು ಭಾವವಿಷ್ಟರಾಗಿದ್ದಾಗ ತಕ್ಷಣ ಅವರ ಕಾಲುಗಳನ್ನು ಮುಟ್ಟಿದರೆ ಅವರು ಸಹಜ ಸ್ಥಿತಿಗೆ ಹಿಂತಿರುಗಬಲ್ಲರು ಎಂದು ಅವರಿಗೆ ಠಾಕೂರರೇ ಹೇಳಿದ ಮಾತು ನೆನಪಾಯಿತು. ತಕ್ಷಣ ಶ್ರೀಮಾತೆ ಅವರ ಕಾಲುಗಳನ್ನು ಉಜ್ಜಲು ಪ್ರಾರಂಭಿಸಿದರು. ರಾಖಾಲ ಮೊದಲಾದವರು ಶ್ರೀಮಾತೆಯವರು ಅಳುವ ಧ್ವನಿ ಕೇಳಿ ಬೇಗ ಒಳಗೆ ಬಂದು, ಅವರೂ ಠಾಕೂರರ ಕಾಲುಗಳನ್ನು ಉಜ್ಜಲು ಪ್ರಾರಂಭಿಸಿದರು.

ಇದರಿಂದ ಠಾಕೂರರು ಸಹಜ ಸ್ಥಿತಿಗೆ ಬಂದು ಕಣ್ಣನ್ನು ತೆರೆದು ಆಶ್ಚರ್ಯದಿಂದ ''ಏನಾಯಿತು?'' ಎಂದು ಕೇಳಿದರು. ವಿಷಯ ತಿಳಿದು ಶ್ರೀಮಾತೆಯವರ ಹೆದರಿಕೆ ಅರ್ಥವಾಗಿ ನಗುತ್ತಾ, ''ನಾನು ಬಿಳಿಯರ ದೇಶದಲ್ಲಿದ್ದೆ. ಅವರ ಚರ್ಮ ಹೃದಯ ಎಲ್ಲಾ ಬಿಳಿಯದಾಗಿತ್ತು. ಅವರು ಸರಳರು ಮತ್ತು ಸಜ್ಜನರಾಗಿದ್ದರು. ಅವರ ದೇಶ ಬಹು ಸುಂದರವಾಗಿತ್ತು. ನಾನು ಅಲ್ಲಿಗೇ ಹೋಗೋಣವೆಂದು ಆಲೋಚಿಸುತ್ತಿದ್ದೆ'' ಎಂದರು. ತಕ್ಷಣ ಶ್ರೀಮಾತೆ, ''ನೀವು ಅಲ್ಲಿಗೆ ಹೋದರೆ ನಿಮಗೆ ತುಂಬಾ ಹಸಿವೆಯಾಗುತ್ತದೆ. ಆಗ ಏನು ಮಾಡುವಿರಿ?'' ಎಂದು ಕಾತರ ಹಾಗೂ ವಿನಯದಿಂದ ಕೇಳಿದರು. ಆಗ ಠಾಕೂರರು ತಮ್ಮ ಕೈಗಳಿಂದ ಹಣೆಗೆ ಮೂರು, ನಾಲ್ಕು ಬಾರಿ ಹೊಡೆದುಕೊಂಡು ಶ್ರೀಮಾತೆಯವರಿಗೆ, ''ನೀನು ತುಂಬಾ ದಡ್ಡಿ, ನಿನಗೆ ಏನೂ ಗೊತ್ತಿಲ್ಲ'' ಎಂದರು.

ಒಂದು ದಿನ ರಾತ್ರಿ ಠಾಕೂರರು ರಾಧೆಯ ಭಾವವನ್ನು ಆರೋಪಿಸಿಕೊಂಡು ತೋಟದ ಲತಾಗೃಹದಲ್ಲಿ ಶ್ರೀಕೃಷ್ಣನನ್ನು ಭೇಟಿ ಮಾಡಲು ನಿಶ್ಚಯಿಸಿದರು. ತಮ್ಮ ಕೊಠಡಿಯಿಂದ ಹೊರಬಂದು ಗುಲಾಬಿ ತೋಟವನ್ನು ಪ್ರವೇಶಿಸಿದರು. ಅವರಿಗೆ ಬಾಹ್ಯ ಜಗತ್ತಿನ ಪರಿವೆಯೇ ಇರಲಿಲ್ಲ, ಒಳಗೆ ಹೋದೊಡನೆ ಗುಲಾಬಿ ಗಿಡಗಳ ಪೊದೆಯಲ್ಲಿ ಸಿಕ್ಕಿಕೊಂಡರು, ಅದರ ಮುಳ್ಳುಗಳು ಅವರನ್ನು ತರಚಿ ಗಾಯಗೊಳಿಸಿತು. ಆಗ ಅವರು ಅಲ್ಲಿಯೇ ನಿಂತುಬಿಟ್ಟಿದ್ದರು. ರಾತ್ರಿ ಪಹರೆಯವನು ಅವರನ್ನು ನೋಡಿ ಎಬ್ಬಿಸಿ, ದೇವಸ್ಥಾನದ ವ್ಯವಸ್ಥಾ

ಪಕರೂ ಸೇರಿ ಅವರನ್ನು ಮರಳಿ ದೇವಾಲಯಕ್ಕೆ ಕರೆತಂದರು. ಆಗ ನಾನೂ ದೇವಾಲಯಕ್ಕೆ ಹೋದೆ. ಈ ಗಲಾಟೆ ಎಲ್ಲರನ್ನೂ ಎಚ್ಚರ ಗೊಳಿಸಿ ಎಲ್ಲರೂ ಅವರನ್ನು ಸುತ್ತುವರಿದರು. ಶ್ರೀಮಾತೆಯವರೂ ಅಲ್ಲಿಗೆ ಬಂದು ಅಳಲು ಪ್ರಾರಂಭಿಸಿದರು. ಇದೇ ಮೊದಲಬಾರಿ ಶ್ರೀಮಾತೆಯವರು ಸಾರ್ವಜನಿಕವಾಗಿ ಕಾಣಿಸಿಕೊಂಡುದು.

ಆಮೇಲೆ ಶ್ರೀ ಠಾಕೂರರನ್ನು ಅವರ ಕೊಠಡಿಗೆ ಕರೆತಂದರು. ಆಗಲೂ ಅವರು, 'ನಾನು ಲತಾ ಮಂಟಪಕ್ಕೆ ಹೋಗುತ್ತಿದ್ದೇನೆ. ನೀವೇಕೆ ನನಗೆ ತೊಂದರೆ ಕೊಡುತ್ತಿದ್ದೀರಿ?' ಎನ್ನುತ್ತಿದ್ದರು. ಈ ಘಟನೆಯ ನಂತರ ನಾನೂ ಶ್ರೀಮಾತೆಯೂ ಅವರ ಕೊಠಡಿಯಲ್ಲೇ ಮಲಗುತ್ತಿದ್ದೆವು. ಒಂದೆರಡು ದಿನಗಳಾದ ನಂತರ ಅವರು ''ನಮಗೆ ಈಗ ಬಹಳ ಸೆಕೆ. ಹೀಗೇಕೆ ಒದ್ದಾಡುತ್ತಿದ್ದೀರಿ? ನಹಬತ್‌ನಲ್ಲಿ ಹೋಗಿ ಮಲಗಿ' ಎಂದರು. ನಾವು ಹಾಗೇ ಮಾಡಿದೆವು.

ಒಂದು ಸಲ ಠಾಕೂರರು ನನಗೆ ಕಾಳೀಮಾತೆಯ ಪ್ರಸಾದ ವನ್ನು ತಿನ್ನಲು ಹೇಳಿದರು. ನಾನು ಮೀನಿನ ಪ್ರಸಾದವನ್ನು ತಿನ್ನಲು ಹೆಣಗಾಡುತ್ತಿದ್ದೆ (ಏಕೆಂದರೆ ಹಿಂದೂ ವಿಧವೆಯರು ಶುದ್ಧ ಸಸ್ಯಾಹಾರಿಗಳಾಗಿರುತ್ತಾರೆ) ಆದರೆ ಠಾಕೂರರು, ''ನೀನು ಶೀತಲಾ ದೇವಿಯ ಅಂಶ, ತಿನ್ನು'' ಎಂದು ಬಲವಂತ ಮಾಡಿದರು. ''ಇದು ಪ್ರಸಾದ. ತಿನ್ನಲು ಹಿಂಜರಿಯಬೇಡ. ನೀನು ನನ್ನ ಮಾತನ್ನು ಕೇಳ ದಿದ್ದರೆ ಮತ್ತೊಮ್ಮೆ ಜನ್ಮ ತಾಳಬೇಕಾಗುತ್ತದೆ. ನೀನು ಅವಲಕ್ಷಣದ, ದಪ್ಪಗಿರುವ ಗಂಡನನ್ನು ಪಡೆಯುತ್ತೀಯಾ. ಅವನು ನಿನ್ನನ್ನು ಈ ಪ್ರಾಪಂಚಿಕ ಜೀವನಕ್ಕೆ, ನಿನ್ನ ಇಷ್ಟಕ್ಕೆ ವಿರುದ್ಧ ವಾಗಿ, ಬಲವಂತವಾಗಿ ಎಳೆದುತರುತ್ತಾನೆ'' ಎಂದರು. ನಾನು, ''ಸರಿ ಹಾಗಾದರೆ. ನಿಜ ವಾಗಿಯೂ ನಾನು ಈ ಪ್ರಾಪಂಚಿಕ ಮೋಹಕ್ಕೆ ಖಂಡಿತಾ ಬಲಿ ಯಾಗಲಾರೆ. ಅದಕ್ಕಿಂತ ಈ ಮಾಂಸಾಹಾರ ಪ್ರಸಾದವನ್ನು ತಿನ್ನು ವುದೇ ಒಳ್ಳೆಯದು'' ಎಂದು ಹೇಳಿದೆ.

ಠಾಕೂರರಿಗೆ ತಮ್ಮ ಭಕ್ತರ ಮೇಲೆ ಅತಿಶಯವಾದ ಪ್ರೀತಿ ಯಿತ್ತು. ಒಮ್ಮೆ ಬಲರಾಮ ಬಸು ತಮ್ಮ ಹೆಂಡತಿ ಮಕ್ಕಳೊಡನೆ ದಕ್ಷಿಣೇಶ್ವರಕ್ಕೆ ಬಂದರು. ಅವರು ಠಾಕೂರರನ್ನು ಸ್ವಲ್ಪ ಸಮಯ ಭೇಟಿ ಮಾಡಿ, ಮಧ್ಯಾಹ್ನ ಕಲ್ಕತ್ತೆಗೆ ಹೊರಟರು. ಆಗ ಠಾಕೂರರು ತಾವೇ ಅವರನ್ನು ಬೀಳ್ಕೊಡಲು ಚಾಂದನೀಘಾಟ್‌ಗೆ ಅವರೊಂದಿಗೆ ಹೋಗಿ ನಗುತ್ತಾ, ''ನೀವು ಇನ್ನೊಮ್ಮೆ ಬನ್ನಿ'' ಎಂದರು. ದೋಣಿ ಹೊರಟಿತ್ತು. ಠಾಕೂರರು ದೋಣಿ ಸ್ವಲ್ಪ ದೂರದವರೆಗೂ ಹೋಗು ವುದನ್ನೇ ನೋಡುತ್ತಾ ನಿಂತಿದ್ದರು. ಇದ್ದಕಿದ್ದಂತೆ ಆಕಾಶದಲ್ಲಿ ಕರಿ ಮೋಡಗಳು ತುಂಬಿ ಬಲವಾದ ಗಾಳಿ ಬೀಸತೊಡಗಿತು. ಠಾಕೂರರು ಬಹಳ ಆತಂಕಕ್ಕೊಳಗಾದದ್ದನ್ನು ನಾನು ಗಮನಿಸಿದೆ. ಅವರು ಹಿಂತಿ ರುಗಿ ತಳಮಳಗೊಂಡು ಹುಡುಗನಂತೆ ಓಡತೊಡಗಿದರು. ಅವರು ಆತಂಕದಿಂದ ಅಲೆಗಳ ಹೊಡೆತಕ್ಕೆ ಸಿಕ್ಕಿ ಹೊಯ್ದಾಡುತ್ತಿದ್ದ ದೋಣಿ ಯನ್ನೇ ನೋಡುತ್ತಿದ್ದರು.

ಗಾಬರಿಯಿಂದ ಎಲ್ಲರೊಡನೆ, ''ಏನಾಗಬಹುದು? ಬಲರಾಮ ಬಸು ಮತ್ತು ಅವನ ಕುಟುಂಬ ಉಳಿಯುತ್ತದೆಯೆ? ಅಯ್ಯೋ, ಏನಾಗುತ್ತಿದೆ? ಆತ ಬಲರಾಮ ಬಸು ಉಪಯೋಗವಿಲ್ಲದ, ತಿಳು ವಳಿಕೆ ಇಲ್ಲದ, ದಕ್ಷಿಣೇಶ್ವರದ ಪಿರಾಗಿ ಮನುಷ್ಯನನ್ನು ನೋಡಲು ಬಂದು, ತನ್ನ ಜೀವ ಕಳೆದುಕೊಂಡನಲ್ಲಾ ಎನ್ನುವುದಿಲ್ಲವೆ?'' ಎನ್ನುತ್ತಾ ಚಡಪಡಿಸುತ್ತಿದ್ದರು. ನಿಧಾನವಾಗಿ ದೋಣಿ ದೂರವಾ ಗುತ್ತಾ ಹೋಯಿತು. ಠಾಕೂರರು ಕೊಠಡಿಗೆ ಹಿಂತಿರುಗಿದರು. ಅವರ ಮುಖ ಖಿನ್ನತೆಯಿಂದ ಕೂಡಿತ್ತು, ಮನಸ್ಸು ಅಶಾಂತಿಯಿಂದ ತುಂಬಿತ್ತು. ಅವರು, 'ತಾಯಿ, ನನ್ನ ಮುಖದ ಮೇಲಿನ ದುಃಖ ನಿನಗೆ ಕಾಣಿಸುತ್ತಿಲ್ಲವೆ? ನಿನಗೆ ನನ್ನ ಪ್ರಾರ್ಥನೆ ಕೇಳಿಸುತ್ತಿಲ್ಲವೆ? ತಾಯಿ ಏನಾಗುತ್ತಿದೆ?' ಎಂದು ಪ್ರಾರ್ಥಿಸಲು ಪ್ರಾರಂಭಿಸಿದರು.

ಠಾಕೂರರ ಸ್ಥಿತಿಯನ್ನು ನೋಡಿ ಯೋಗೇನ್ (ಮುಂದೆ ಸ್ವಾಮಿ ಯೋಗಾನಂದರು) ಏನೂ ಹೇಳದೆ ಆ ಗಾಳಿ ಮಳೆಗಳ ನಡುವೆಯೇ ಬಲರಾಮ ಬಸುವಿನ ವಿಚಾರ ತಿಳಿಯಲು ಕಲ್ಕತ್ತೆಗೆ ಹೊರಟ. ಅವನು ಆಲಂಬಜಾರಿನಿಂದ ಒಂದು ಬಾಡಿಗೆ ಗಾಡಿ ಮಾಡಿ ಕೊಂಡಿದ್ದ. ವಿಷಯ ತಿಳಿದು ರಾತ್ರಿ ಹಿಂತಿರುಗಿ ಬಂದು, ಬಲ ರಾಮ ಬಸು ಮತ್ತು ಅವರು ಕುಟುಂಬ ಸುಖವಾಗಿ ತಲುಪಿತ್ತು ಎಂದು ಠಾಕೂರರಿಗೆ ಹೇಳಿದ.

ಯೋಗೇನ್ ಠಾಕೂರರಿಗೆ, ''ನಿಮ್ಮ ಆಶೀರ್ವಾದದಿಂದ ಏನೂ ತೊಂದರೆಯಾಗದೆ, ಅವರು ಸುಖವಾಗಿ ಮನೆ ಸೇರಿದ್ದಾರೆ. ನಿಮ್ಮ ಕಳವಳ, ಆತಂಕ ನೋಡಿ ನಾನೇ ಹೋಗಿ ಅವರ ವಿಚಾರ ತಿಳಿದು ಬಂದೆ. ದೋಣಿ ನದಿಯಲ್ಲಿ ಬಹಳವಾಗಿ ಹೊಯ್ದಾಡುತ್ತಿದ್ದು, ಒಂದು ಬಾರಿ ಇನ್ನೇನು ಮುಗುಚಿ ಹೋಗು ತ್ತದೆಯೋ ಎಂಬಂತೆ ಆಗಿದ್ದು, ಹೇಗೋ ಸರಿ ಹೋಗಿ ಊರು ತಲುಪಿದರು'' ಎಂದ.

ಠಾಕೂರರು ಕಾಶೀಪುರದ ತೋಟದ ಮನೆಯಲ್ಲಿ ನಿಧನರಾದ ದಿನ ಇನ್ನೂ ನನಗೆ ನೆನಪಿದೆ. ಅವರು ಆ ದಿನ ಹಾಸಿಗೆಯ ಮೇಲೆ ದಿಂಬಿಗೆ ಒರಗಿ ಕುಳಿತಿದ್ದರು. ನಿಶ್ಶಬ್ದವಾಗಿತ್ತು. ಎಲ್ಲರೂ ಅವರ ಸ್ವರ ಸಂಪೂರ್ಣವಾಗಿ ನಿಂತುಹೋಗಿದೆ ಎಂದೇ ತಿಳಿದಿದ್ದರು. ಆದರೆ ನಾನು, ಶ್ರೀಮಾತೆ ಕೊಠಡಿಯೊಳಕ್ಕೆ ಬಂದೊಡನೆ ಅವರು ನಿಧಾನ ವಾಗಿ ತುಂಬಾ ಮೆತ್ತಗೆ ಶ್ರೀಮಾತೆಗೆ, ''ನೀನು ಬಂದೆಯಾ? ಕೇಳು, ನಾನು ನೀರಿನಲ್ಲಿ ಎಲ್ಲಿಗೋ ತುಂಬಾ ದೂರ ಹೋಗುತ್ತೇನೆ'' ಎಂದರು. ಶ್ರೀಮಾತೆ ಅಳಲು ಪ್ರಾರಂಭಿಸಿದರು. ಬಳಿಕ ಠಾಕೂರರು ಮೆತ್ತಗೆ, ಸಣ್ಣಧ್ವನಿಯಲ್ಲಿ ''ಯೋಚನೆ ಮಾಡಬೇಡ, (ಭಕ್ತರನ್ನು ತೋರಿಸಿ) ಅವರೆಲ್ಲಾ ನನ್ನನ್ನು ನೋಡಿಕೊಂಡಂತೆಯೇ ನಿನ್ನನ್ನೂ ನೋಡಿಕೊಳ್ಳುತ್ತಾರೆ. ಲಕ್ಷ್ಮಿಯನ್ನು ಚೆನ್ನಾಗಿ ನೋಡಿಕೋ, ಅವಳು ನಿನ್ನ ಜೊತೆಗಾತಿ'' ಎಂದರು.

ಈಗಲೂ ಅವರ ಕೊನೆಯ ದಿನದ ಮುಖವು ಚೆನ್ನಾಗಿ ನೆನಪಿದೆ. ಹಾಸಿಗೆಯ ಮೇಲೆ ಕುಳಿತು ಕಣ್ಣಿನಲ್ಲಿ ನೀರು ಸುರಿಸುತ್ತಾ ಸಮಾಧಿ ಯಲ್ಲಿ ಮುಳುಗಿದರು.



# ಸ್ವಾಮಿ ಅಖಂಡಾನಂದರ ಸ್ಮೃತಿಸಂಚಯ

ಬಂಗಾಳಿ ಮೂಲ: **ಸ್ವಾಮಿ ನಿರಾಮಯಾನಂದ** ಕನ್ನಡಕ್ಕೆ: **ಕುಮಾರಿ ಪಿ.ಉಷಾ**

**ಭಾಗ-೪**



ಕೆಲವು ದಿನಗಳ ನಂತರ ಮಧ್ಯಾಹ್ನ ಊಟವಾದ ಮೇಲೆ ಬಾಬಾ ಕೋಣೆಯಲ್ಲಿ ಕುರ್ಚಿಯೊಂದರಲ್ಲಿ ಕುಳಿತಿದ್ದಾರೆ. ಕೆಲವು ಮಂದಿ ಸೇವಕರು ಹಾಗೂ ಭಕ್ತರು ಉಪಸ್ಥಿತರಿದ್ದಾರೆ. ಬಾಬಾ ಹೇಳಿದರು: ''ಖಾಗಡಾದ ಛಾನಾ ವಡೆ* ನಿಜಕ್ಕೂ ಅದ್ಭುತವಾಗಿರುತ್ತದೆ. ಖಾಗಡಾದ ಹತ್ತಿರವಿದೆ ವಿಷ್ಣುಪುರ. ಅಲ್ಲಿನ ದೇವತೆ ದಯಾಮಯಿ ಕಾಳಿ ಬಹಳ ಜಾಗೃತ ದೇವತೆ. ಸಾಮಾನ್ಯವಾಗಿ ನನ್ನ ಬಾಯಿಗೆ ಏನೂ ರುಚಿಸುವುದಿಲ್ಲ. ಆದರೆ ಅಲ್ಲಿ ೩ ಗಂಟೆಯ ಹೊತ್ತಿಗೆ ಪ್ರಸಾದ ಸಿಕ್ಕಿತು.ಅಲ್ಲಿನ ಕಡಲೆ ಸಾರು ಅಮೃತದಂತಿತ್ತು. ಖಾಗಡಾದ ಛಾನಾ ವಡೆಯನ್ನು ಠಾಕೂರರು ತಿನ್ನಬಯಸಿದ್ದರು. ಅದನ್ನು ನಾನು ತಂದುಕೊಟ್ಟಿದ್ದೆ.''

ಅನಂತರ ವಿಶ್ರಮಿಸುತ್ತ ಬಾಬಾ ಅದ್ಭುತವಾದ ನೆನಪಿನ ಶಕ್ತಿಯ ಒಂದು ಕತೆಯನ್ನು ಹೇಳಿದರು: ''ತ್ರಿವೇಣಿಯಲ್ಲಿ ತರ್ಕ ಪಂಚಾನನರ ಮನೆಗೆ ಹೋಗಿದ್ದೆ. ಅವರು ಅಲ್ಲಿ ಎಲ್ಲವನ್ನೂ ತೋರಿಸಿದರು. ಅವರು ಎಷ್ಟೋ ಕತೆಗಳನ್ನೆಲ್ಲ ಹೇಳಿದರು. ಅಲ್ಲಿ ಇಬ್ಬರು ಬಿಳಿಯರು (ವಿದೇಶೀಯರು) ವಾದಿಸುತ್ತಿದ್ದರು. ತರ್ಕ ಪಂಚಾನನರು ಗಂಗೆಯಲ್ಲಿ ಮೀಯುತ್ತ ಅದನ್ನೆಲ್ಲ ಕೇಳಿಸಿಕೊಳ್ಳುತ್ತಿದ್ದರು. ತೀರ್ಮಾನ ಹೇಳುವಾಗ ಎಲ್ಲವನ್ನೂ ಬಾಯಿಪಾಠ ಮಾಡಿದ್ದಂತೆ ಹೇಳಿದರು. ವರ್ಧಮಾನಕ್ಕೆ ಹೋಗುವಾಗ ದಾರಿಯ ಇಬ್ಬದಿಯಲ್ಲೂ ಏನೇನನ್ನು ಕಂಡಿದ್ದರೋ ಅದನ್ನೆಲ್ಲ ಚಾಚೂ ತಪ್ಪದೆ ಹೇಳಿಬಿಟ್ಟರು – Sir William Jones ಅವರ ಶಿಷ್ಯರು.

''ಮುರ್ಶಿದಾಬಾದಿನ ಚಿತ್ರಕಲಾವಿದನೊಬ್ಬ ನವಾಬರ ಮೆರವಣಿಗೆಯನ್ನು ನೋಡಿ, ಅದರಂತೆಯೇ ಚಿತ್ರವನ್ನು ಬರೆದು, ಅದನ್ನು ನವಾಬನಿಗೆ ಉಪಹಾರವಾಗಿ ಕೊಟ್ಟಿದ್ದ. ಚಿತ್ರದ ಕೊನೆಯಲ್ಲಿ ಎರಡು ಹಂದಿಗಳು ಓಡಿ ಹೋಗುತ್ತಿರುವುದನ್ನು ರಚಿಸಲಾಗಿತ್ತು. ನವಾಬನು ಕೋಪದಿಂದ ಕೆಂಡವಾಗಿ, 'ಹಂದಿ! ಹಂದಿ' ಎಂದು ಉದ್ಗರಿಸಿದ. ಅವನು ಕಲಾವಿದನಿಗೆ ಹಣ ಕೊಡಲಿಲ್ಲ. ಪಾಪ, ಅವನು ಕಣ್ಣೀರು ಸುರಿಸುತ್ತಾ ಹೇಳಿದ, ''ಏನನ್ನು ನಾನು ನೋಡಿದೆನೋ ಅದನ್ನು ಹಾಗೆಯೇ ಚಿತ್ರಬಿಡಿಸಿದ್ದೇನೆ. ಕೊನೆಯಲ್ಲಿ ಎರಡು ಹಂದಿಗಳನ್ನು ನೋಡಿದ್ದೆ. ಅದರಂತೆಯೇ ಚಿತ್ರವನ್ನು ರಚಿಸಿದ್ದೇನೆ.'' ಅದಕ್ಕೆ ನವಾಬ ಹೇಳಿದ, ''ಓ ಹಾಗೇನು? ನಿಲ್ಲು.'' ಮತ್ತೆ ಮೆರವಣಿಗೆ ಮಾಡಿಸಲಾಯಿತು – ಈ ಸಲ ಎಲ್ಲವನ್ನೂ ಪಟ್ಟಿ

*ಹಾಲಿನ ಕೆನೆಯನ್ನು ಬತ್ತಿಸಿ, ಗಟ್ಟಿಯಾಗಿಸಿ 'ಚನಾ' ತಯಾರಿಸುತ್ತಾರೆ. ಅದರಿಂದ ತಯಾರಿಸಿದ ವಡೆಯನ್ನೇ 'ಛಾನಾ ವಡೆ' ಎನ್ನುತ್ತಾರೆ.

ಮಾಡಿಟ್ಟರು – ಎಷ್ಟು ಆನೆ, ಎಷ್ಟು ಕುದುರೆ, ಎಷ್ಟು ಪಾದಚಾರಿ, ಯಾವ ಯಾವ ಬಣ್ಣದ ಪತಾಕೆಗಳು, ಯಾವ ವಸ್ತ್ರ – ಇತ್ಯಾದಿ. ಚಿತ್ರ ಬಿಡಿಸಿದ ಮೇಲೆ ನೋಡಿದರು, ಚಿತ್ರದಲ್ಲಿ ಏನೂ ವ್ಯತ್ಯಾಸ ವಿರಲಿಲ್ಲ.

''ಕೇಳಿದ್ದನ್ನು ಹಾಗೇ ನೆನಪಿನಲ್ಲಿಡುವವನು ಶತಾಭಿಧಾನಿ. ಯಾವ ಭಾಷೆಯೇ ಆಗಲಿ, ಒಮ್ಮೆ ಕೇಳಿದರೆ ಅದನ್ನು ಬಾಯಿಪಾಠ ಹೇಳಿಬಿಡುವನು. ಪರೀಕ್ಷಿಸಿ ನೋಡೋಣವೆಂದು ಠಾಕೂರರ ಸ್ತವ ವನ್ನು ಹೇಳಿದೆ, 'ವಿಶುದ್ಧ ವಿಜ್ಞಾನಮಗಾಧ ಸೌಖ್ಯಂ..' ಕೂಡಲೇ ಅವರು ಅದನ್ನು ಬಾಯಿಪಾಠ ಹೇಳಿಬಿಟ್ಟರು. ಅದು ಅವರಿಗೆ ಸಾಧ್ಯವೆಂದು ನಾನಂದುಕೊಂಡಿರಲಿಲ್ಲ.''

ಒಂದು ದಿನ ಸಂಜೆ ೫.೩೦ ಗಂಟೆಯಾಗಿತ್ತು. ಬೇಲೂರು ಮಠದ ಮಹಡಿಯ ಕೋಣೆ. ಮಠದ ಕೆಲವು ಪ್ರಮುಖ ಸಾಧು ಗಳು ಅಲ್ಲಿದ್ದರು. ಬಾಬಾ ಆರಾಮಕುರ್ಚಿಯಲ್ಲಿ ಕುಳಿತಿದ್ದಾರೆ. ಸ್ವಾಮಿ ಮಾಧವಾನಂದರು ಕೇಳಿದರು, ''ಮಹಾರಾಜ್, (ಶತಾಬ್ದಿಯ ಸಂದರ್ಭದಲ್ಲಿ) 'ಬರೊ ಧಾನ್ಯ'ದ ಬೀಜವನ್ನು ಕುರಿತು ನೀವು ಬರೆದ ಲೇಖನದ ಬಗ್ಗೆ 'ಹಾಗೆಂದರೇನು?' ಎಂದು ಅನೇಕರು ಕೇಳಿದ್ದಾರೆ.'' ಮಹಾರಾಜರೆಂದರು, ''ನನ್ನಿಚ್ಛೆಯಂತೆ ಬರೆದಿದ್ದೇನೆಯೆ? ಒಂದು ದಿನ ಮುಂಜಾನೆ ಠಾಕೂರರು ಹೇಳಿ ದರು, 'ಬರಿ, ಹೀಗೆ ಹೀಗೆ ಬರಿ' ಎಂದು. ನಾನು ಕೇಳಿಸಿಕೊಂಡೆ. ಎಲ್ಲಿ ಮರೆತು ಹೋದೀತೋ ಎಂದು ತಕ್ಷಣವೇ ಬರೆದಿಡಲು ಹೊರಟೆ. ಆಗ ನಾನು ಭಾವಪರವಶನಾಗಿದ್ದೆ. ಪೆನ್ನು, ಕಾಗದಗಳಿ ಗಾಗಿ ಅವರಿವರನ್ನು ಕರೆದೆ. ಯಾರೂ ಬರಲಿಲ್ಲ. ಕೊನೆಗೆ ಕಣ್ಣು, ಮುಖಕ್ಕೆ ನೀರು ಹಾಕಿಕೊಂಡು, ಮೋಂಬತ್ತಿ ಉರಿಸಿ, ನಾನೇ ಕುಳಿತುಕೊಂಡೆ. ಪ್ರಯತ್ನವಿಲ್ಲದೆ ತಾನಾಗಿಯೇ ಬರವಣಿಗೆ ನಡೆ ಯಿತು. ಅನಂತರ ಅದರ ಅರ್ಥವನ್ನು ಅರಿತೆ. (ಠಾಕೂರರು ಪ್ರಪಂಚದಾದ್ಯಂತ ಧಾನ್ಯವನ್ನು ಬಿತ್ತಿ ಹೋಗಿದ್ದಾರೆ. ಸೂಕ್ತ ಭೂಮಿ ಹಾಗೂ ವಾತಾವರಣ ದೊರೆತಾಗ ಧಾನ್ಯ ಮೊಳೆಯುತ್ತದೆ ಎಂದು ಅದರಲ್ಲಿ ಬರೆಯಲಾಗಿದೆ.)

''ಅನೇಕ ಹುಡುಗರು ಬಂದು ಕೇಳುತ್ತಾರೆ –'ರಾಮಕೇಷ್ಟೋ ('ರಾಮಕೃಷ್ಣ' ಎಂಬುದರ ಆಡುಮಾತಿನ ರೂಪ) ಭಗವಂತನಾಗಿ ದ್ದರೆ ಭಾರತವೇಕೆ ಸ್ವತಂತ್ರವಾಗುತ್ತಿಲ್ಲ?' ಎಂದು. ಅಯ್ಯಾ, ಅವರು ನಿರಪೇಕ್ಷರಾಗಿ ತಮ್ಮ ಭಾವದ ಬೀಜವನ್ನು ನಾಲ್ಕೂ ದಿಕ್ಕುಗಳಲ್ಲಿ ಬಿತ್ತರಿಸಿದ್ದಾರೆ. ಎಲ್ಲಿ ಮಣ್ಣು ಹೇಗಿದೆಯೊ, ಜನರ ಪ್ರಯತ್ನ ಹೇಗೊ ಅದರಂತೆ ಫಸಲು ಬೆಳೆಯುತ್ತದಲ್ಲವೆ?

''ಭಾರತಕ್ಕೆ, ವಿಶೇಷವಾಗಿ ಬಂಗಾಳಕ್ಕೆ ಅವರು ಏನನ್ನು ನೀಡಿ ದ್ದಾರೋ ಅದೇ ಬೇಕಾದಷ್ಟಾಯಿತು. ಈ ಭಾವವನ್ನೇ ನಮಗೆ ಹಿಡಿದುಕೊಳ್ಳಲಾಗುತ್ತಿಲ್ಲ, ೮೦೦ ವರ್ಷಗಳ ಗುಲಾಮತನ! ಏನು ಮಾಡಲಿ? ನಮ್ಮಲ್ಲಿ ಶಕ್ತಿಯೂ ಇಲ್ಲ , ಏನೂ ಇಲ್ಲ. Spirit of adventure, determination, discipline (ಸಾಹಸ, ಧೃಢಸಂಕಲ್ಪ, ಶಿಸ್ತು) ಗಳಾವುವೂ ನಮ್ಮಲ್ಲಿ ಕಾಣುತ್ತಿಲ್ಲ. ನಿಜವಾಗಿ ಹೇಳುವುದಾದರೆ, ನನಗಿದರ ಮೇಲೆ ಸ್ವಲ್ಪವೂ ವಿಶ್ವಾಸವಿಲ್ಲ. ಸ್ವತಂತ್ರ ರಾಷ್ಟ್ರಗಳಲ್ಲಿ ಠಾಕೂರರ ಭಾವ ಹೇಗೆ ಪ್ರಚಾರವಾಗುತ್ತಿದೆ, ಮುಂದೆ ಹೇಗೆ ಆಗುವುದು ಎಂಬುದನ್ನು ನೋಡು. ಅವರಿಗೆ ಶಕ್ತಿಯಿದೆ, ಇಚ್ಛಾಶಕ್ತಿಯಿದೆ – ಇರಬೇಕಾದ ಸಾಮರ್ಥ್ಯವೆಂದರೆ ಇದೇ.

''ಠಾಕೂರರ ಭಾವವನ್ನು ಸೇವೆಯಲ್ಲಿ ನೋಡು. ಆದರೆ ಅದರ ಪ್ರಕಾಶ ಒಬ್ಬೊಬ್ಬರ ಸಾಮರ್ಥ್ಯಕ್ಕನುಗುಣವಾಗಿ ಉಂಟಾ ಗುವುದು. ಸ್ವಾಮೀಜಿಯವರ ಸಾಮರ್ಥ್ಯ ಅನಂತವಾದುದು. ಆದ್ದರಿಂದ ಅವರಲ್ಲಿ ಅನಂತ ಭಾವಗಳ ಪ್ರಕಾಶವುಂಟಾಗಿದೆ. ಸಾಮರ್ಥ್ಯಕ್ಕೆ ತಕ್ಕಂತೆ ಪ್ರಕಾಶ. ನಿಜವಾಗಿ ಹೇಳುತ್ತೇನೆ, ನನಗೆಷ್ಟು ಲಭಿಸಿದೆಯೋ ಅಷ್ಟಕ್ಕೇ ನಾನು ಕೃತಾರ್ಥನಾಗಿದ್ದೇನೆ. ಹೋಗು, ಆರತಿಯನ್ನು ನೋಡಲು ಹೋಗು. ಸಂಜೆಯಾಗಿ ಹೋಗಿದೆ. ಹರಿ ಬೋಲ್, ಹರಿ ಬೋಲ್, ಹರಿ ಬೋಲ್!''

ಒಂದು ಮಧ್ಯಾಹ್ನ ಊಟದ ನಂತರ, ವಿಶ್ರಾಂತಿಗೆ ಮೊದಲು ಡಾಕ್ಟರ್ ಬಂದಿದ್ದಾರೆ. ಅಂದು ಬಾಬಾರ ಹಲ್ಲಿನ ಸೆಟ್ಟು ಬಂದಿದೆ.

**ಮಹಾರಾಜ್:** ಈ ಸಲವೇನಾದರೂ ಹಲ್ಲಿನಿಂದ ರಕ್ತ ಬಂದರೆ, ಮಾಡುತ್ತೇನೆ ನಿಮಗೆ!

**ಡಾಕ್ಟರ್:** ಇಲ್ಲ, ಇಲ್ಲ. ಇನ್ನು ರಕ್ತ ಬರುವುದಿಲ್ಲ. ಬಂದರೆ ಸರಿ ಮಾಡಿ ಕೊಡುತ್ತೇನೆ.

**ಮಹಾರಾಜ್:** ಅರೆ! ಥೂ! ತಮಾಷೆ ಅರ್ಥವಾಗುವುದಿಲ್ಲವೆ? ಕಟ್ಟಿಸಿದ ಹಲ್ಲುಗಳಿಂದ ರಕ್ತ ಬರುವುದೇ? (ಕೋಣೆಯಲ್ಲಿದ್ದವರು ಜೋರಾಗಿ ನಕ್ಕರು) ಹಲ್ಲು–ಗಿಲ್ಲಿನಿಂದ ಇನ್ನೇನಾಗಬೇಕು? ವಯಸ್ಸಾ ಯಿತು. ಇನ್ನೇನೂ ಆಸೆಯಿಲ್ಲ. ಇನ್ನಿರುವುದು ಒಂದೇ ಆಸೆ – ಠಾಕೂರರನ್ನು ನೋಡುತ್ತಾ ನೋಡುತ್ತಾ ಹೋಗಬೇಕೆನ್ನುವುದು. (ಡಾಕ್ಟರರಿಗೆ) ಬೇಸಿಗೆಯಲ್ಲೊಮ್ಮೆ ಸಾರಗಾಛಿಗೆ ಬನ್ನಿ, ಆಗದೆ?

ಮಧ್ಯಾಹ್ನ ಊಟದ ಬಳಿಕ ಬಾಬಾ ಆರಾಮ ಕುರ್ಚಿಯಲ್ಲಿ ಕುಳಿತಿದ್ದಾರೆ. ಕಾನಾಯ್ ಒಬ್ಬ ಭಕ್ತ ಹುಡುಗ. ಬಾಗಬಜಾರ್‌ನಲ್ಲಿ ಅವನ ಮನೆ. ಚಿಕ್ಕಂದಿನಿಂದಲೂ ಬಲರಾಮ ಮಂದಿರದ ಮಹಾ ರಾಜರುಗಳಿಗೆ ಪರಿಚಿತ. ಮಠಕ್ಕೆ ಬಂದಿರಲು ಅವನಿಗೆ ಆಸೆ, ಆದರೆ ಕೆಲಸದ ಭಯದಿಂದ ತಲೆಮರೆಸಿಕೊಂಡು ಹೋಗಿದ್ದಾನೆ. ಮಹಾ ರಾಜರೊಬ್ಬರು ಅವನನ್ನು ಸ್ವಲ್ಪ ಬೈದಿದ್ದರು. ಸರಳನಾದ ಕಾನಾಯ್ ಬಾಬಾಗೆ ಎಲ್ಲ ವಿಷಯವನ್ನೂ ಹೇಳಿಬಿಟ್ಟಿದ್ದಾರೆ. ಬಾಬಾ ಕಾನಾಯ್‌ಗೆ ಹೇಳುತ್ತಿದ್ದಾರೆ: ''ಭಯವೇಕೆ? ಸ್ವಾಮೀಜಿ ಹೇಳು ತ್ತಿದ್ದರು, ಭಯವೇ ಮಹಾಪಾಪ. Coward (ಹೇಡಿ) ಎಲ್ಲಿಯ ವನು! ಹೋಗು, ಅನಂಗ ಮಹಾರಾಜರ ಪಾದಗಳಿಗೆ ನಮಸ್ಕರಿಸಿ ಬಾ. ಸಾಧುಗಳ ಕೋಪಕ್ಕೆ ಹೆದರಬಾರದು. ಅದು ನಿನಗೆ ಮಂಗಳ

ವನ್ನು ಉಂಟುಮಾಡುತ್ತದೆ. ಮನುಷ್ಯರಿಗೆ ಹೆದರಿದರೆ, ಅಥವಾ ಒಬ್ಬ ಮನುಷ್ಯನೆದುರು ದೃಢವಾಗಿ ನಿಲ್ಲಲಾಗದಿದ್ದರೆ, ಯಮನ ಮುಂದೆ ಹೇಗೆ ನಿಲ್ಲುವೆ? ಯಮನಿಗೆ ಸಮಯದ ಕಾಲದ ಲೆಕ್ಕಾಚಾರವಿಲ್ಲ. ಸಾವಿನ ಸಮಯ ಈಗಲೇ ಬರಬಹುದು. ಉಪನಿಷತ್ತಿನಲ್ಲಿ ಹೇಳಿದೆ – ನಚಿಕೇತ ಯಮನೆದುರು ನಿಂತು ಪ್ರಶ್ನಿಸುತ್ತಾನೆ: 'ಮೃತ್ಯುವಿನ ನಂತರ ಏನು?' ಎಂದು. ಯಮನೆನ್ನುತ್ತಾನೆ – 'ಈ ಪ್ರಶ್ನೆಯನ್ನು ಬಿಟ್ಟು ಬೇರೇನಾದರೂ ಕೇಳು. ಒಂದು ವರವನ್ನು ತೆಗೆದುಕೋ.' ನಚಿಕೇತ ಹೇಳುತ್ತಾನೆ, 'ನನಗೆ ವರ ಬೇಡ. ಬೇರೆ ಯಾವ ಪ್ರಶ್ನೆಯೂ ನನ್ನಲ್ಲಿಲ್ಲ.' ಅಷ್ಟು ಚಿಕ್ಕ ಹುಡುಗನದು ಎಂಥ ಸಾಹಸ! ಯಮನ ಮುಂದೆ ನಿಂತು ಈ ರೀತಿ ಮಾತನಾಡುತ್ತಿದ್ದಾನೆ! ಸ್ವಾಮೀಜಿಯ ವಿಚಾರ ಅಭ್ಯಾಸ ಮಾಡಿದ್ದೀಯಾ? ಬಾಲ್ಯದಲ್ಲಿ ಕಲಿತಿದ್ದೆಯಲ್ಲ 'ನಾಚೂಕ್ ತಾಹಾತೇ ಶ್ಯಾಮಾ' (ಕಾಳಿ ಅದರಲ್ಲಿ ನರ್ತಿಸಲಿ) ಅದು ನೆನಪಿದೆಯಾ? ಕಂಠಪಾಠ ಮಾಡಿದ್ದೀಯಾ?''

ಕಾನಾಯ್ ಹಾಡಲು ಆರಂಭಿಸಿದ:

**ಜಾಗೋ ವೀರ್, ಘುಚಾಯೇ ಸ್ವಪನ್, ಶಿಯರೇ ಶಮನ್**
**ಭಯ್ ಕೀ ತೋಮಾರ್ ಶಾಜೇ?**
**..ಚೂರ್ಣ ಹೋಕ್ ಸ್ವಾರ್ಥ್, ಸಾಧ್, ಮಾನ್**
**ಹೃದಯ ಸ್ಮಶಾನ್, ನಾಚೂಕ್ ತಾಹಾತೇ ಶ್ಯಾಮಾ ॥**

(ಏಳು ವೀರನೆ, ಸ್ವಪ್ನವ ತೊರೆ; ಕಾಲ ಸನ್ನಿಹಿತವಾಗಿದೆ. ಬರಿದೆ ಭಯವೇಕೆ ನಿನಗೆ? ಸ್ವಾರ್ಥ, ಆಸೆ, ದರ್ಪಗಳು ನುಚ್ಚು ನೂರಾಗಿ, ಹೃದಯವನು ಸ್ಮಶಾನಗೈದಾಗ, ಕಾಳಿ ಅದರಲ್ಲಿ ನರ್ತಿಸಲಿ.)

**ಬಾಬಾ:** (ಅಲ್ಲಿದ್ದವರೊಂದಿಗೆ) ನೋಡಿದಿರಾ? ಎಷ್ಟು ಶಕ್ತಿಪೂರ್ಣವಾಗಿದೆ! ಆಹ! ಸ್ವಾಮೀಜಿ ಅಭಯದ ಪ್ರತಿಮೂರ್ತಿ.

ರಂಗೂನ್‌ನಿಂದ ಬಂದ ಪೂಜ್ಯ ಸ್ವಾಮಿ ವಿಜ್ಞಾನಾನಂದರು ಒಂದೆರಡು ದಿನ ಬೇಲೂರು ಮಠದಲ್ಲಿದ್ದರು. ಬಂದ ದಿನದಂದು ಸಂಜೆ ಈ ಇಬ್ಬರು ವೃದ್ಧ ಶಿಶುಗಳ ಮಿಲನದ ದೃಶ್ಯ ಅತ್ಯಂತ ಮನೋಹರವಾಗಿತ್ತು. ವಿಜ್ಞಾನ್ ಮಹಾರಾಜರು ಬಾಬಾರ ಕೋಣೆಗೆ ಕಾಲಿಡುತ್ತಲೇ ಬಾಬಾ ಅವರನ್ನು ಗಟ್ಟಿಯಾಗಿ ಆಲಂಗಿಸಿದರು. ಆಮೇಲೆ ಇಬ್ಬರೂ ಎರಡು ಕುರ್ಚಿಗಳಲ್ಲಿ ಕುಳಿತು, ಮಕ್ಕಳಂತೆ ಮಾತನಾಡತೊಡಗಿದರು:

''ನಿನ್ನ ಹತ್ತಿರ ಎಷ್ಟು ಫೌಂಟನ್ ಪೆನ್ನುಗಳಿವೆ? ನನಗೊಂದನ್ನು ಕೊಡು.''

''ನಾನೇಕೆ ಕೊಡಲಿ? ನಿನ್ನ ಬಳಿ ಕೂಡ ಅಷ್ಟೊಂದು ಇವೆಯಲ್ಲಾ?''

''ಸರಿ, ದಂತದ ಪೆನ್ನು ಇದೆಯೆ?''

ಮುರ್ಷಿದಾಬಾದಿನಲ್ಲಿ ದಂತದಿಂದ ಬಹಳ ನಾಜೂಕಾದ ಕೆತ್ತನೆಯ ಕೆಲಸವನ್ನು ಮಾಡುತ್ತಾರೆ. ಕೆಲಕಾಲ ಈ ವಿಷಯವಾಗಿ ಮಾತನಾಡಿ, ನಂತರ ಪೂಜ್ಯ ವಿಜ್ಞಾನ ಮಹಾರಾಜರು ಪಕ್ಕದಲ್ಲಿದ್ದ ತಮ್ಮ ಕೋಣೆಗೆ ತೆರಳಿದರು.

**೧೯೩೬ರ ಮಾರ್ಚ್, ೨ನೇ ವಾರ:** ಬಹುಶಃ ಸ್ವಾಮಿ ಅಖಂಡಾನಂದ ಮಹಾರಾಜರು ಮಠಕ್ಕೆ ಬಂದು ಅನೇಕ ತಿಂಗಳು ಕಳೆದಿವೆ. ಮುಂದಿನ ವಾರ ಅವರು ಸಾರಗಾಛಿಗೆ ಹೋಗುವಂತೆ ತೋರುತ್ತದೆ. ಆದ್ದರಿಂದ ಭಕ್ತರು ಅವರನ್ನು ನೋಡಲು ಬಂದಿದ್ದಾರೆ.

ಮಠದ ಮಹಡಿಯ ಕೋಣೆಯಲ್ಲಿ ಆರಾಮಕುರ್ಚಿಯ ಮೇಲೆ ಮಹಾರಾಜರು ಕುಳಿತಿದ್ದಾರೆ. ನೆಲದ ಮೇಲೆ ಕೆಲವರು ಸಾಧು-ಬ್ರಹ್ಮಚಾರಿಗಳು ಕುಳಿತಿದ್ದಾರೆ, ಕೆಲವರು ನಿಂತಿದ್ದಾರೆ. ಮಹಾರಾಜರು ಬಿಹಾರದ ಭೂಕಂಪದ ಬಗ್ಗೆ ಮಾತನಾಡುತ್ತಿದ್ದಾರೆ: ''ಆ ದಿನ ಬಿಹಾರ ಭೂಕಂಪದ ರಿಲೀಫ್ (ಪರಿಹಾರ ಕಾರ್ಯ) ನೋಡಲು ಹೋಗಿದ್ದೆ. ಜನರ ಕಷ್ಟ ನೋಡಿ ನನ್ನಎದೆ ಒಡೆಯಿತು. ಅದಕ್ಕಿಂತ ಹೆಚ್ಚಾಗಿ ರಿಲೀಫ್‌ನ ಮೆರುಗನ್ನು ನೋಡಿ. ಅವರೆಲ್ಲ ಉಪಯುಕ್ತ ಕಾರ್ಯವನ್ನೇ ಮಾಡುತ್ತಿದ್ದರು, ಆದರೆ ಸಾಮಾನ್ಯ ಭಾವದಿಂದ. ಏನಾದರೂ ಸ್ವಲ್ಪ ಕೆಲಸ ನಡೆದಿದ್ದರೆ ಅದು ನಮ್ಮ ಹುಡುಗರಿಂದಲೇ; ಉಳಿದವರೆಲ್ಲ ಏನೋ ತಮಾಷೆಗಾಗಿ ಮಜಾ ಮಾಡುತ್ತಿದ್ದಾರೆ. ಇವರಾದರೂ ಇನ್ನೇನು ಮಾಡುತ್ತಾರೆ ಹೇಳು? ಮೇಯರ್ ಕೊಟ್ಟ ಮೊತ್ತ ೬೦,೦೦೦ ರೂ.ಗಳನ್ನೂ ಕೂಡ ಇಂಜಿನಿಯರ್, ಕಂಟ್ರಾಕ್ಟರ್‌ಗಳಿಗೋಸ್ಕರ ಖರ್ಚುಮಾಡಬೇಕು. ಎಲ್ಲದಕ್ಕಿಂತ ಹೆಚ್ಚು ಹಣ ಸಂಗ್ರಹವಾಗಿರುವ Viceroy's Fund ನಿಂದ ಆಫೀಸ್ ಕ್ವಾರ್ಟರ್ಸ್ ಕಟ್ಟಲಾಗುವುದೆಂದು ಕೇಳಿದೆ. ಅವುಗಳೂ ನಾಶವಾಗಿವೆ, ಅವನ್ನೂ ಪುನಃ ನಿರ್ಮಿಸಬೇಕು. ಮತ್ತೆ Central Relief Fund (ಕೇಂದ್ರೀಯ ಪರಿಹಾರ ನಿಧಿ) ಕಾಂಗ್ರೆಸ್‌ನದ್ದು. ಅವರು ಒಂದೂವರೆ ಲಕ್ಷ ರೂಪಾಯಿಗಳನಿಟ್ಟುಕೊಂಡು ಕುಳಿತಿದ್ದಾರೆ. ಈ ವಿಪತ್ತಿನ ಸಮಯದಲ್ಲಿ ಗಾಂಧೀಜಿಯವರ ಮಾತುಗಳು ಮದ್ದಳೆಯಂತೆ ಹೃದಯಕ್ಕೆ ತಟ್ಟಿತು. ಅವರೆಂದಿದ್ದರಲ್ಲಾ, ಭೂಕಂಪಕ್ಕೆ ಅಸ್ಪೃಶ್ಯತೆಯೇ ಕಾರಣ ಎಂದು? ಹೀಗೆಂದದ್ದು ಸರಿಯಲ್ಲ. ಯಾವುದರಿಂದ ಏನಾಗುವುದೆಂದು ಯಾರಿಗಾದರೂ ಹೇಳಲು ಸಾಧ್ಯವೆ?''

* * *

ಎರಡು ಮೂರು ದಿನಗಳಲ್ಲಿ ಬಾಬಾ ಸಾರಗಾಛಿಗೆ ಹೋಗುವರು. ಮತ್ತೆ ಎಂದು, ಎಲ್ಲಿ ಭೇಟಿಯಾಗುವುದೋ, ಯಾರಿಗೆ ಗೊತ್ತು? ಆದ್ದರಿಂದ ಭಕ್ತ ಇಂದು ಪ್ರಣಾಮ ಮಾಡಲು ಒಬ್ಬನೇ ಬಂದಿದ್ದಾನೆ. ಬಾಬಾ ಹೇಳಿದರು, ''ನಾನು ಈ ಸಲ ಹೋಗಿದ್ದಾಗ ಒಮ್ಮೆ ಸಾರಗಾಛಿಗೆ ಬಾ, ಏನು? ಹೆಚ್ಚು ದಿನ ಅಲ್ಲಿರುವಂತೆ ವ್ಯವಸ್ಥೆ ಮಾಡಿಕೊಂಡು ಬಾ. ಇಲ್ಲಿ ಜನ ಜಾಸ್ತಿ, ಗಲಾಟೆ. ಅಲ್ಲಿ ಎಲ್ಲರೂ ನಮ್ಮವರೆ.''

* * *

೧೯೩೬ನೇ ಇಸವಿ, ಏಪ್ರಿಲ್ ೨೫ : ಇಂದು ಅಕ್ಷಯ ತೃತೀಯಾ– ಸಾಯಂಕಾಲ ರೈಲಿನಲ್ಲಿ ಪ್ರಯಾಣ ಮಾಡಿದ ಭಕ್ತನು ಪರಿಚಿತ ಸಂನ್ಯಾಸಿಗಳೊಂದಿಗೆ ಸಾರಗಾಛಿಗೆ ಬಂದಿದ್ದಾನೆ. ಈ ಹಿರಿಯ ಸಾಧುಗಳು ಅಲ್ಲಿದ್ದಷ್ಟು ದಿನವೂ ಹಲವಾರು ಒಳ್ಳೆಯ ಭಾವನೆಗಳಿರುವ ವಿಷಯಗಳನ್ನು ಅತ್ಯಂತ ಸರಳ ಹಾಗೂ ಶಕ್ತಿಶಾಲಿಯಾದ ಭಾಷೆಯಲ್ಲಿ ಹೇಳುತ್ತಿದ್ದರು. ಬಾಬಾ ಬಳಿಗೆ ಬಂದಿರುವ ಕುರಿತಾಗಿ ಅವರು ಹೀಗೆಂದಿದ್ದರು: 'ಯಾವಾಗ ಲಾದರೂ ಒಂದು ಬಾರಿ ಅವರ ಬಳಿಗೆ ಹೋಗು. ಬಹಳ ಕಾಲ ಅವರನ್ನು ಬಿಟ್ಟಿರಬೇಡ. ಅವರ ಸ್ನೇಹದ ನೋಟಮಾತ್ರದಿಂದಲೂ ಮಂಗಳವಾಗುವುದು.' ಬಾಬಾ ಕೂಡ ಹೇಳಿದ್ದಾರೆ, 'ಇವನುಬಹಳ ಕಾಲದಿಂದಲೂ ನಮ್ಮವನೆ! ಅನೇಕ ದಿನ ದೂರವಿದ್ದ – ಮರೆತು ದೂರವಿದ್ದ – ಈಗ ತನ್ನ ನಿಜವಾದ ಸ್ಥಾನಕ್ಕೆ ಬಂದಿದ್ದಾನೆ!' ಅಂತ.

ಮಾರನೆ ದಿನ ಬೆಳಗ್ಗೆ ಬಾಬಾ ಹೇಳುತ್ತಿದ್ದಾರೆ, ''Usefulness (ಪ್ರಯೋಜನ) ಇರಬೇಕು. ಯಾವಾಗ, ಎಲ್ಲಿದ್ದರೂ ಒಂದು Useful, responsible (ಪ್ರಯೋಜನದ, ಜವಾಬ್ದಾರಿಯ) ಕೆಲಸವನ್ನು ಮಾಡಿಕೊಂಡಿರಬೇಕು. ಆಗಲೇ ನಿನಗೂ ಶಾಂತಿ. ಇಲ್ಲ ವಾದರೆ, 'ಇದೇನು ಮಾಡುತ್ತಿದ್ದೇನೆ' ಎಂದು ನಿನಗೂ ಅನ್ನಿಸು ತ್ತದೆ, ಆ ಕೆಲಸ ನಿಷ್ಪ್ರಯೋಜಕವೆಂದು ಇತರರಿಗೂ ತೋರುವುದು. ಬೀಗದ ಕೈಯನ್ನು ತೆಗೆದುಕೊ, ದುಡ್ಡಿನ ಲೆಕ್ಕವಿಡು. ಯಾವಾಗ ಯಾರಿಗೇನು ಬೇಕೋ ಹೇಳುತ್ತೇನೆ ಹಣ ಕೊಡು. ಒಳ್ಳೆಯ ಕೆಲಸವಾಯ್ತು, ಅಲ್ಲವೆ? ಈ ಕೋಣೆಯಲ್ಲಿ ಪೆಟ್ಟಿಗೆ ಇದೆ. ಕರೆದಾಗ ಬಾ. ದೂರದಲ್ಲಿರಬೇಡ. ನನ್ನ ಬಳಿಗೆ ಬಂದಿದ್ದೀಯೆ; ನನ್ನ ಹತ್ತಿರವೇ ಇರು. ಎಂಟು ಗಂಟೆಗೆ ಸರಿಯಾಗಿ ಈ ಕಡೆ ಬಂದು ಬಿಡು.''

ಮಾರನೆಯ ದಿನ ಬೆಳಗ್ಗೆ ೧೫–೨೦ ನಿಮಿಷ ತಡವಾಗಿ ಹೋಗಿದ್ದೆ. ಬಾಬಾ ಬೈಯುತ್ತಿದ್ದಾರೆ, ''ಇಷ್ಟು ತಡವೇಕೆ? ಮೇಲಿದ್ದೆಯೇನು? ದೇವರಮನೆಯಲ್ಲಿದ್ದೆಯಾ? ಕೆಲಸ ಮಾಡ ಬೇಕು, ಸದಾ ಜಪಮಾಡುವ ಭಾವವಿರಬೇಕು'' ಬ್ರಹ್ಮಚಾರಿ ಯೊಬ್ಬ ಹೇಳಿದ, ''ಗೀತೆಯನ್ನೋದುತ್ತಿದ್ದ. ಚೆನ್ನಾಗಿ ಓದುತ್ತಾನೆ.'' ತಕ್ಷಣ ಬಾಬಾ ಹೇಳಿದರು, ''ಏನು, ಗೀತೆ ಓದುತ್ತಿದ್ದನೆ? ಏನು ಗೀತೆಯನ್ನೋದುತ್ತಿದ್ದ? ಓದಲು ಗೊತ್ತೇ ನಿನಗೆ? ಒಂದು ದಿನ ನಾನು ಓದಿ ತೋರಿಸಿಕೊಡುತ್ತೇನೆ – ಕಲಿತುಕೊಂಡು ಓದು. ಗೀತೆಯಲ್ಲಿರುವುದೂ ಇದೇ ಮಾತು – ನಾನು ಹೇಳಿದ್ದೇ ಇದೆ.''

ಇನ್ನೊಮ್ಮೆ ಹೇಳಿದರು, ''ಇಷ್ಟು ದಿನ, ಬಂದಿದ್ದು ಮತ್ತೆ ಹೊರಟುಹೋಗುತ್ತಿದ್ದೀಯಾ. ಈ ಸಲ ಇಲ್ಲೇ ಇದ್ದುಬಿಡು. ಯಾರು ಹೇಗೆ ಹೊಂದಿಕೊಳ್ಳುವರೋ ಇಲ್ಲವೋ ಎಂದು ಎರಡು ದಿನದಲ್ಲೇ ತಿಳಿಯುತ್ತದೆ. ಅನೇಕ ಬಾರಿ ನಾನು ಅನೇಕ ಮಾತು ಗಳನ್ನು ಹೇಳುತ್ತೇನೆ. ಮೆಣಸಿನ ಕಾಯಿ ಒಗ್ಗರಣೆ ಎಷ್ಟರಮಟ್ಟಿಗೆ ಸಹಿಸುತ್ತೀ ಎಂದು ನೋಡುತ್ತೇನೆ, ತಿಳಿಯಿತೆ? ''

ಮತ್ತೊಂದು ಬಾರಿ common sense (ಸಾಮಾನ್ಯಜ್ಞಾನ) ಬಗ್ಗೆ ಹೇಳಿದರು: ''ಸ್ವಾಮೀಜಿ ಪಾಶ್ಚಾತ್ಯವನ್ನು ಗೆದ್ದರು – ನಿವೇದಿತಾಳಂತಹ ಪ್ರಖರ ಬುದ್ಧಿವಂತೆಯನ್ನು ಗೆದ್ದರು, ವೇದಾಂತ ದಿಂದಲ್ಲ, common sense ನಿಂದ. ನಿವೇದಿತಾ ಪ್ರಶ್ನೆಯ ಮೇಲೆ ಪ್ರಶ್ನೆಯನ್ನು ಕೇಳಿದಾಗ ಸ್ವಾಮೀಜಿ ಶಾಂತಭಾವದಿಂದ ಸಹಜ, ಸರಳ ಉತ್ತರಗಳನ್ನು ಕೊಟ್ಟರು. ಈಗಿನ ಕಾಲದಲ್ಲಿ common sense ಉಳ್ಳವರು ವಿರಳ. University ಗಳಲ್ಲಿ ಅದು ಹಾಳಾಗುತ್ತದೆ, ಅದರ ವಿಕಾಸ ದೂರದ ಮಾತು. ನಾನು ನೋಡುತ್ತಿದ್ದೇನೆ, ಬಿ.ಎ. ಎಂ.ಎ ಪಾಸುಮಾಡಿದ ಹುಡುಗರು ಮೂರ್ಖರಂತೆ ಮಾತನಾಡುತ್ತಾರೆ. ಹಳ್ಳಿಯ ಜನರು ಎಷ್ಟು common sense ನಿಂದ ಮಾತನಾಡುತ್ತಾರೆ, ನೋಡಿ.''

ಸಾಯಂಕಾಲ ಜಗುಲಿಯಲ್ಲಿ camp cotನ ಮೇಲೆ, ದೇಹದ ಮೇಲ್ಭಾಗದಲ್ಲಿ ಉಡುಪಿಲ್ಲದೆ ಕುಳಿತು ಬಾಬಾ ಮುಕ್ತಕಂಠದಿಂದ ಹಾಡುತ್ತಿದ್ದಾರೆ:

**ಏಕ ರಟತ ವೇದ – ಶಿವ, ಶುಕ, ನಾರದ।**
**ರಟತ ಯುಗ ಯುಗ, ಪಾರ ನಹೀ ಪಾವತ॥**

(ಸರ್ವ ವೇದಗಳೂ, ಶಿವ, ಶುಕ, ನಾರದರೂ ಪರಮಸತ್ಯ ಒಂದೇ ಎಂದು ಯುಗಯುಗಗಳಿಂದ ಸಾರಿದ್ದಾರೆ. ಆದರೆ ಇಂದಿಗೂ ಸಹ ಯಾರೂ ಅದನ್ನು ಅಳೆಯಲು ಸಾಧ್ಯವಾಗಿಲ್ಲ.)

''ಈ ಹಾಡುಗಳನ್ನೆಲ್ಲ ಹರಿದ್ವಾರ – ಹೃಷಿಕೇಶಗಳಲ್ಲಿ ಸಾಧುಗಳು ಹಾಡುತ್ತಾರೆ. ಎಂಥ ಆಳವಾದ ಭಾವ, ಎಷ್ಟು ಗಂಭೀರ ಸ್ವರ! ನನಗೆ ಚೆನ್ನಾಗಿ ಹಾಡಲು ಬರುತ್ತಿಲ್ಲವೆಂದು ಸ್ವಾಮೀಜಿ ಹೇಳುತ್ತಿದ್ದರು. ನಿನ್ನ ಸ್ವರ ಉಚ್ಚಾರಣೆ ಚೆನ್ನಾಗಿದೆ. ಸ್ತೋತ್ರಪಠಣ ಮಾಡು. ಸ್ವಾಮೀಜಿ ಅದೆಲ್ಲಿಯೋ ಒಂದು ಬಾರಿ ಹಾಡಿದರು. ಆಗ ನನಗೆ 'ರಾಗವಾಗಿ ಒಂದು ಸ್ತೋತ್ರವನ್ನು ಪಠಿಸು' ಎಂದಿದ್ದರು.''

ಮುಂಜಾನೆ ಏಳುವ ಬಗ್ಗೆ ಬಾಬಾ ಹೇಳುತ್ತಿದ್ದರು: ''ಖೇತ್ರಿಯ ಮಹಾರಾಜರು ತಡವಾಗಿ ಏಳುತ್ತಿದ್ದರು. ಒಂದು ದಿನ ನಾನೆಂದೆ, 'ಹೆಚ್ಚಾಗಿ ತಿನ್ನುವವರನ್ನು ಹಾಗೂ ತಡವಾಗಿ ಏಳುವವರನ್ನು ಲಕ್ಷ್ಮಿ ಬಿಟ್ಟುಹೋಗುತ್ತಾಳೆ ಅಂತ. ಅಂದಿನಿಂದ ಅವರು ಮುಂಜಾನೆಯೇ ಏಳುತ್ತಿದ್ದರು, ನನಗಿಂತ ಬೇಗನೆ. ಎದ್ದು ನೋಡುತ್ತೇನೆ, ಮಹಾ ರಾಜರು ನಗುತ್ತಿದ್ದಾರೆ, ಒಮ್ಮೊಮ್ಮೆ ಮೇಲ್ಛಾವಣಿಯ ಮೇಲೆ ನಡೆದಾಡುತ್ತಿದ್ದರು, ಒಮ್ಮೊಮ್ಮೆ ದೀಪವನ್ನು ಉರಿಸಿಕೊಂಡು ಓದು ತ್ತಿದ್ದರು – ಭಾರೀ ಲೈಬ್ರರಿ ಅದು.

''ಠಾಕೂರರು ಹಾಗೂ ಅವರ ಶಿಷ್ಯರು ಮುಂಜಾನೆಯೇ ಏಳು ತ್ತಿದ್ದರು. ಒಂದು ದಿನ ಮಠದಲ್ಲಿ ಶರತ್ ಮಹಾರಾಜ್ ಹಾಗೂ ನಾನು ಒಂದೇ ಕೋಣೆಯಲ್ಲಿ ಮಲಗಿದ್ದೆವು. ಮಂಗಳಾರತಿ ಆಗಿ ಬಿಟ್ಟಿದೆ. 'ಠಾಕೂರರು ಎದ್ದುಬಿಟ್ಟಿದ್ದಾರೆ, ನಾನು ಮಲಗುವುದೆ?

ಛಿ, ಛಿ' ಎಂದುಕೊಂಡು ಬೇಗನೆ ಎದ್ದೆ. ಸ್ವಲ್ಪ ನಂತರವೇ ಶರತ್ ಮಹಾರಾಜರು ಎದ್ದರು. ನಾನು ಮಲಗಿದ್ದೇನೆಂದು ಅವರು ಭಾವಿಸಿದರು! ನನ್ನನ್ನು ಎಬ್ಬಿಸುವ ಪ್ರಯತ್ನ ಮಾಡುತ್ತಿರುವಾಗಲೇ ಕಿಟಿಕಿ ಅಲುಗಾಡಿಸಿ, ನಾನು ಎದ್ದುಬಿಟ್ಟಿರುವುದು ಅವರಿಗೆ ತಿಳಿಯುವಂತೆ ಮಾಡಿದೆ. ಹಿಂದಿನ ದಿನ ಮುಂಜಾನೆ ನಾನು ಎದ್ದಿರಲಿಲ್ಲ. ಆದ್ದರಿಂದ ರಾತ್ರಿ ಹೀಗೆ ಹೇಳಿಕೊಂಡು ಮಲಗಿದ್ದೆ, 'ಏಯ್ ಅಖಂಡಾನಂದ, ಬೆಳಿಗ್ಗೆ ೩ ಗಂಟೆಗೆ ಎದ್ದೇಳು' ಅಂತ. ಬೆಳಿಗ್ಗೆ ಸರಿಯಾಗಿ ೩ ಗಂಟೆಗೆ ಯಾರೋ ಕರೆದು ಎಬ್ಬಿಸುತ್ತಿದ್ದಾರೆ, 'ಏಯ್ ಅಖಂಡಾನಂದ, ಎದ್ದೇಳು, ೩ ಗಂಟೆಯಾಗಿದೆ' ಎಂಬಂತೆ. ಠಾಕೂರರು ಯಾವಾಗ ಮಲಗುತ್ತಿದ್ದರೋ ತಿಳಿಯದು. ಹಾಗೇ ಸ್ವಾಮೀಜಿ ಕೂಡ; ರಾತ್ರಿ ಕರೆದಾಗಲೆಲ್ಲ ಅವರು ಓಗೊಡುತ್ತಿದ್ದರು.

''ಉನ್ನತ ಜೀವನದಲ್ಲಿ ನಿದ್ರೆ ಕಡಿಮೆ. ಶರೀರ ಶಕ್ತಿಶಾಲಿಯಾಗಿರಬೇಕು, ಸಬಲವಾಗಿರಬೇಕು. ಮುಂಜಾನೆಯೇ ಏಳಬೇಕು. ಹಾಸಿಗೆಯಲ್ಲಿಯೇ ಸ್ವಲ್ಪ ಹೊತ್ತು ಭಗವದ್‌ಚಿಂತನೆ ಮಾಡಬೇಕು – ಆಗ ಮನಸ್ಸು ಶಾಂತವಾಗುತ್ತದೆ. ಆನಂತರ ಹಾಸಿಗೆಯನ್ನು ತೆಗೆದಿಟ್ಟು ಕೋಣೆಯನ್ನು ಗುಡಿಸಿ ಸ್ವಚ್ಛಗೊಳಿಸು, ಹೊಸಿಲಲ್ಲಿ ನೀರು ಹಾಕು. ಮಾಡುವ ಎಲ್ಲಾ ಕೆಲಸಗಳಲ್ಲಿ ಭಗವದ್ಭಾವವಿರಬೇಕು.''

* * *

ಸಾಮಾನುಗಳನ್ನು ಕೊಳ್ಳುವುದರ ಬಗ್ಗೆ ಬಾಬಾ ಒಬ್ಬರಿಗೆಂದರು, ''ಕೊಸರು ಪಡೆಯಬೇಕು.* ಇಲ್ಲಿ ಮೋಸ ಹೋಗುವವರು ಅಲ್ಲಿಯೂ ಮೋಸ ಹೋಗುವರು, ಇಲ್ಲಿ ಸಿಕ್ಕಿದರೆ ಅಲ್ಲಿಯೂ ಸಿಗುವುದು. ಧರ್ಮವನ್ನಾಚರಿಸು, ಆದರೆ ಮೋಸ ಹೋಗುವೆಯೇಕೆ? 'ಭಕ್ತನಾಗಿದ್ದೀ ಅಂತ ಮೂರ್ಖನಾಗಬೇಕೆ?' ವಂಚಕ ಹಾಗೂ ವಂಚಿತ ಇಬ್ಬರೂ ಒಂದೇ. ಠಾಕೂರರು ಹೇಳಿದ 'ಕೊಸರನ್ನು ಪಡೆಯುವ' ಮಾತನ್ನು ನಾನು ಚೆನ್ನಾಗಿ ಪಾಲಿಸುತ್ತೇನೆ. ಶಾಲನ್ನು ಕೊಳ್ಳುವಾಗ ಕಂಠವಸ್ತ್ರವನ್ನು ಉಚಿತವಾಗಿ ಪಡೆದಿದ್ದೇನೆ. ಕಾಶ್ಮೀರದಲ್ಲಿ ಶಾಲು ಕೊಂಡುಕೊಳ್ಳುವಾಗ ವರ್ತಕರಿಗೆ ಹೇಳಿದೆ, ''ಅದರೊಂದಿಗೆ ಇನ್ನೇನಾದರೂ ಉಚಿತವಾಗಿ ಕೊಡುವುದಿದ್ದರೆ ಕೊಂಡುಕೊಳ್ಳುತ್ತೇನೆ, ಇಲ್ಲದಿದ್ದರೆ ಇಲ್ಲ.'' ಅದಕ್ಕೆ ಅವರೆಂದರು, ''ಇದೇನು? ಶಾಲಿನ ಜೊತೆಗೆ ಬೇರೇನು ಕೊಡುವುದಂತೆ?'' ನಾನೆಂದೆ, ''ಏಕೆ? ಕಂಠವಸ್ತ್ರವಿಲ್ಲವೆ?'' ಅವರೆಂದರು, ''ಅದರ ಬೆಲೆ ೩–೪ ರೂಪಾಯಿ.'' ''ಹಾಗಾದರೆ ಬೇಡ ಬಿಡಿ. ಗುರುವಿನ ಆಜ್ಞೆ ಪಾಲಿಸಬೇಕು. ಕೊಸರನ್ನು ಕೊಡಲೇಬೇಕು'' ಎಂದೆ. ಕಡೆಗೆ ಆತ ಒಂದು ಕಂಠವಸ್ತ್ರವನ್ನೂ ಕೊಟ್ಟ. ಬಹರಾಂಪುರದ ರಾಖಾಲ ಅದನ್ನು ಕಲಿತಕೊಂಡು ರೇಷ್ಮೆ ವಸ್ತ್ರದ ಜೊತೆ ರುಮಾಲನ್ನೂ ಉಚಿತವಾಗಿ ಪಡೆದ.''

---

* ಇದು ಶ್ರೀರಾಮಕೃಷ್ಣರು ಹೇಳಿದ ಮಾತು. ವ್ಯವಹಾರ ಜ್ಞಾನವಿರಬೇಕು; ಮೋಸ ಹೋಗಬಾರದು ಎನ್ನುತ್ತಿದ್ದರು. ಮಾರುಕಟ್ಟೆಯಲ್ಲಿ ಉಚಿತವಾಗಿ ಸಿಗುವುದನ್ನೂ ಬಿಡಬಾರದು ಎನ್ನುತ್ತಿದ್ದರು ಶ್ರೀರಾಮಕೃಷ್ಣರು.

ವೈಶಾಖಮಾಸದ ಮಧ್ಯಾಹ್ನ; ೧೧–೧೨ ಗಂಟೆಯಾಗಿದೆ. ಬಹಳ ಬಿಸಿಲು. ಬಾಬಾ ಸೌತೆಕಾಯಿ ಮಾರುವವನಿಗೆ ಹಣಕೊಡಲು ಭಕ್ತನನ್ನು ಕರೆಯುತ್ತಿದ್ದಾರೆ. ವ್ಯಾಪಾರಿ ಹೊರಗೆ ನಿಂತು ಬೆಲೆ ಚೌಕಾಶಿ ಮಾಡುತ್ತಿದ್ದಾನೆ. ಅವನು ಐದೂವರೆ ಆಣೆ ಹೇಳುತ್ತಿದ್ದಾನೆ. ಬಾಬಾ ೫ ಆಣೆ ಎನ್ನುತ್ತಿದ್ದಾರೆ. ಇಬ್ಬರೂ ಒಪ್ಪುತ್ತಿಲ್ಲ. ಬಾಬಾ ಸ್ನಾನ ಮುಗಿಸಿ ಕೋಣೆಗೆ ಹಿಂದಿರುಗುತ್ತಿದ್ದಾರೆ. ತಲೆಗೆ ಒದ್ದೆ ರುಮಾಲು, ಬಾಗಿಲ ಹತ್ತಿರ ನಿಂತು ಚೌಕಾಶಿ ಮಾಡುತ್ತಿದ್ದಾರೆ.

ಭಕ್ತನಿಗೆ ಸ್ವಲ್ಪ ರೇಗಿತು. ಏನಿದು, ಬರಿಯ ಎರಡು ಪೈಸೆಗಳಿಗೋಸ್ಕರ ಬಾಬಾ ತಾವೂ ಕಷ್ಟಪಡುತ್ತಿದ್ದಾರೆ; ಅವನಿಗೂ ಕಷ್ಟ ಕೊಡುತ್ತಿದ್ದಾರೆ. ಭಕ್ತ ಕೈಯಲ್ಲಿ ೫ ಆಣೆಗಳನ್ನು ಹಿಡಿದುಕೊಂಡು ನಿಂತಿದ್ದಾನೆ. ಕೊನೆಗೆ ಐದೂಕಾಲು ಆಣೆಗಳಿಗೆ ಒಪ್ಪಿಸಿದರು. ಸೌತೆಕಾಯಿ ವ್ಯಾಪಾರಿ ಸಾಮಾನನ್ನು ಅಲ್ಲಿಟ್ಟು, ಹಣವನ್ನು ತೆಗೆದುಕೊಂಡು ಹೊರಟುಹೋದ. ಬಾಬಾ ತಲೆಗೆ ರುಮಾಲು ಸುತ್ತಿಕೊಳ್ಳುತ್ತ ಯಾರೋ ಒಬ್ಬನಿಗೆ ಹೇಳಿದರು, ''ಹೋಗು, ಸೌತೆಕಾಯಿಗಳನ್ನು ಒಳಗೆ ತೆಗೆದುಕೊಂಡು ಹೋಗು.''

ನಂತರ ಭಕ್ತನಿಗೆಂದರು, ''ನೀವೆಲ್ಲ ಪಟ್ಟಣದವರು. ನಿಮಗೆ ಇವೆಲ್ಲ ಏನು ಗೊತ್ತು? ಕೇಳಿದಷ್ಟು ಹಣ ಕೊಟ್ಟುಬಿಡುತ್ತೀರಿ. ಈಗ ಅವನು ಮನೆಗೆ ಹೋದ. ಅವನೇನು ಅವುಗಳನ್ನು ಮನೆಗೆ ತೆಗೆದುಕೊಂಡು ಹೋಗುತ್ತಿದ್ದಾನೇನು? ಸ್ವಲ್ಪ ಚೌಕಾಶಿ ಮಾಡಿದ್ದರೆ ಐದಾಣೆಗೆ ಅವನು ಕೊಟ್ಟೇ ಕೊಡುತ್ತಿದ್ದ. ನಾನು ಅದನ್ನೇ ನೋಡುತ್ತಿದ್ದೆ. ನಿನಗೆ ಇದಕ್ಕಿಂತ ಹೆಚ್ಚು ಚೌಕಾಶಿ ಸಾಧ್ಯವಿಲ್ಲ, ನಿನಗೆ ಹಣವನ್ನೆಣಿಸಲು ಬರುತ್ತದೆ ಅಷ್ಟೆ.

''ಪರ್ವತ ಪ್ರದೇಶದಲ್ಲಿ, ಗುಡ್ಡಗಾಡುಗಳಲ್ಲಿ ಸುತ್ತಾಡುವಾಗ ನಾನೆಂದೂ ಹಣವನ್ನು ಮುಟ್ಟಲಿಲ್ಲ. ದುಡ್ಡಿನ ಯಾವ ಸಂಪರ್ಕವೂ ಇರಲಿಲ್ಲ. ಈಗ ಠಾಕೂರರು ಸಂಸಾರಕ್ಕೆ ತಳ್ಳಿರುವಾಗ, ಎಲ್ಲವನ್ನೂ ನೋಡಿಕೊಳ್ಳಬೇಕು. ಖರ್ಚು ಕಡಿಮೆ, ಹೆಚ್ಚು ಉಳಿತಾಯ. ಅದಲ್ಲದೆ Public Money (ಸಾರ್ವಜನಿಕರ ಹಣ) – ಭಕ್ತರು ಕಷ್ಟಪಟ್ಟು ದುಡಿದಿರುವ ಹಣ. ಅವರು ಠಾಕೂರರ ಹೆಸರಿನಲ್ಲಿ ಕೊಡುತ್ತಾರೆ – ನಿನ್ನನ್ನು, ನನ್ನನ್ನು ನೋಡಿ ಕೊಡುತ್ತಿಲ್ಲ. 'ಒಂದು ಕಾಸನ್ನಾದರೂ ಹೇಗೆ ಉಳಿಸಲಿ?' ಎಂಬುದೇ ನಾವು ಮಾಡಬೇಕಾದ ಕರ್ತವ್ಯ.''

ಸ್ವಾಮಿ ಅಭೇದಾನಂದರ ಶಿಷ್ಯರೊಬ್ಬರು ತಮ್ಮ ಪೂರ್ವಾಶ್ರಮವಾದ ಬಹರಾಂಪುರಕ್ಕೆ ಕಾರ್ಯನಿಮಿತ್ತ ಬಂದವರು, ಹಿಂದಿರುಗುವಾಗ ಸಾರಗಾಛಿಗೆ ಬಾಬಾರನ್ನು ದರ್ಶಿಸಲು ಬಂದಿದ್ದಾರೆ. ಶ್ರೀ ಶ್ರೀ ಠಾಕೂರರ ವಿಷಯ ಮಾತನಾಡುತ್ತ ಬಾಬಾ ಹೇಳುತ್ತಿದ್ದಾರೆ, ''ಠಾಕೂರರ ದೇಹವನ್ನು ಕಾಶೀಪುರದ ಉದ್ಯಾನಮನೆಯಿಂದ ಸ್ಮಶಾನ ಘಾಟಿಗೆ ತೆಗೆದುಕೊಂಡು ಹೋಗುವಾಗ, ನಾನು ಚಿಕ್ಕವನಾದ್ದರಿಂದ, ಚಟ್ಟವನ್ನು ಮಾತ್ರ ಹೊತ್ತೆ. ಹೋಗುವಾಗ,

'ಯಾದವಾಯ ಮಾಧವಾಯ ಕೇಶವಾಯ ನಮಃ। ಹರಿಹರಯೇ ನಮಃ ಕೃಷ್ಣಯಾದವಾಯ ನಮಃ ॥'ಎಂದು ಹಾಡುತ್ತಿದ್ದರು. ಠಾಕೂರರ ದೇಹಕ್ಕೆ ತುಂಬ ತುಪ್ಪವನ್ನು ಹಚ್ಚಿದ್ದರಿಂದ ಅದು ಧಗಧಗನೆ ಉರಿಯಿತು. ಹಿಂದಿನ ರಾತ್ರಿ ಠಾಕೂರರಿಗೆ ಸಮಾಧಿ ಯಾಗಿತ್ತು. ಸಮಾಧಿಭಂಗ ಮಾಡಲು ಕ್ಯಾಪ್ಟನ್ ಹೇಳಿದಂತೆ ತುಪ್ಪ ವನ್ನು ಹಚ್ಚಲಾಗಿತ್ತು. ಬೆನ್ನಿಗೆ ರಾತ್ರಿಯೆಲ್ಲ ತುಪ್ಪ ಸವರುತ್ತಿದ್ದೆ. ನನ್ನ ಮೊಣಕೈಯಿಂದ ತುಪ್ಪ ಇಳಿಯುತ್ತಿತ್ತು.''

**ಶಿಷ್ಯ:** ನಿಮಗೆ ಕಾಷಾಯ ವಸ್ತ್ರವನ್ನು ಠಾಕೂರರೇ ಕೊಟ್ಟಿದ್ದರೆ? ಪುಸ್ತಕದಲ್ಲಿ ಹೇಳಿರುವ ೧೨ ಜನರ ಪೈಕಿ ನಿಮ್ಮ ಹೆಸರಿಲ್ಲ. ಆದ್ದರಿಂದ ಕೇಳುತ್ತಿದ್ದೇನೆ.

**ಮಹಾರಾಜ್** : ಹೌದು, ನನಗೆ ಅವರೇ ಕಾಷಾಯವನ್ನು ನೀಡಿದರು. ಸ್ವಾಮೀಜಿ ಬರಿಯ ವಿರಜಾಹೋಮ ಮಾಡಿ ಹೆಸರನ್ನು ಕೊಟ್ಟರು– ಇದು ಬಹಳ ನಂತರ. ಕಾಷಾಯವನ್ನು ಕೊಟ್ಟು ಠಾಕೂರರು ಹೇಳಿದರು, 'ನಿನಗೆ (ಸಂನ್ಯಾಸ) ಸಾಧ್ಯ – ಪತನವಾಗುವುದಿಲ್ಲ!' ಅಂತ. ಅವರ ಆಶೀರ್ವಾದದ ಬಲದಿಂದಲೇ ಈ ಜೀವನ ಚೆನ್ನಾಗಿ ಕಳೆದಿದೆ. ಪುಸ್ತಕದಲ್ಲೇನಿದೆ ಗೊತ್ತೆ? ಹಿರಿಯ ಗೋಪಾಲ ದಾದಾ (ಸ್ವಾಮಿ ಅದ್ವೈತಾನಂದರು) ಕಾಶೀಪುರದಲ್ಲಿ ೧೨ ಜತೆ ಬಟ್ಟೆಗೆ ಕಾಷಾಯ ಬಣ್ಣ ಹಾಕಿಸಿ ತಂದು ಠಾಕೂರರಿಗೆ, 'ಗಂಗಾಸಾಗರಕ್ಕೆ ಯಾತ್ರೆಗೆ ಹೋಗುವ ಸಾಧುಗಳಿಗೆ ಕೊಡುತ್ತೇನೆ' ಎಂದರು. ಅದಕ್ಕೆ ಠಾಕೂರರೆಂದರು, 'ನೀನು ಬೇರೆಲ್ಲಿಗೆ ಹೋಗುವೆ? ಇಲ್ಲಿಯೇ ಒಳ್ಳೆಯ ಸಾಧುಗಳಿದ್ದಾರೆ.' ಹೀಗೆಂದ ಅವರು ಆ ಬಟ್ಟೆಗಳನ್ನು ಅಲ್ಲಿ ಇದ್ದವರಿಗೆ ಕೊಟ್ಟರು. ಒಂದನ್ನು ಗಿರೀಶಬಾಬುವಿಗೋಸ್ಕರ ತೆಗೆದಿಟ್ಟರು. ನಮಗೆಲ್ಲ ಒಂದು ದಿನ ಕೊಟ್ಟಿದ್ದರು. ನಾವು ಅವೆಲ್ಲವನ್ನೂ ತೆಗೆದಿಟ್ಟಿದ್ದೆವು. ಆಗ ತೊಡುತ್ತಿರಲಿಲ್ಲ. ವರಹಾನಗರದ ಮಠದಲ್ಲಿ ಅದನ್ನು ಉಡಲು ಪ್ರಾರಂಭಿಸಿದೆವು. ನಿಮಗೆ ಗೊತ್ತೆ? ಏಸುಕ್ರಿಸ್ತನಿಗೆ ೧೨ ಜನ ಶಿಷ್ಯರಿದ್ದಂತೆಯೇ ಠಾಕೂರರಿಗೂ ಅಷ್ಟು ಮಂದಿ ಶಿಷ್ಯರು ಇರಬೇಕು. ಕಡಿಮೆಯಾದರೂ ಆಗದು, ಹೆಚ್ಚಾದರೂ ನಡೆಯದು.

ನಡುನಡುವೆ ಬಾಬಾಗೆ ಭಕ್ತ ಪತ್ರಗಳನ್ನು ಓದಿ ಹೇಳಬೇಕಿತ್ತು. ಮೊದಲನೆಯ ಪತ್ರದ ಲೇಖಕ ಬರೆದಿದ್ದಾನೆ: ಮನಸ್ಸಿನಲ್ಲಿ ವೈರಾಗ್ಯ ಹುಟ್ಟಿದೆ. ಏನು ಮಾಡಬೇಕು? ಉಪದೇಶ ಕೇಳಿದ್ದಾನೆ.

ಇದನ್ನು ಕೇಳಿದ ಬಾಬಾ, ''ಅವನ ವೈರಾಗ್ಯ, ಮತ್ತೊಂದು ಎಲ್ಲವೂ ಸುಳ್ಳು. ನಿಜವಾಗಿ ವೈರಾಗ್ಯ ಉದಯಿಸಿದರೆ ಯಾರಾದರೂ ಪತ್ರ ಬರೆಯುತ್ತಾರೇನು? ಸುಮ್ಮನೆ ಮನೆ ಬಿಟ್ಟು ಬರುತ್ತಾರೆ. ಠಾಕೂರರು ಹೇಳುತ್ತಿದ್ದ ರೈತನ ಕತೆ ಗೊತ್ತು ತಾನೆ? ವೈರಾಗ್ಯ ಉಂಟಾದಾಗ ಹೆಗಲಿಗೆ ರುಮಾಲು ಹಾಕಿ ಮನೆಬಿಟ್ಟು ಹೊರಟು ಹೋದ. ಅವನ ಹೆಂಡತಿ ಹೇಳಿದ್ದಳು, ತನ್ನ ಅಣ್ಣ ಸ್ವಲ್ಪಸ್ವಲ್ಪವಾಗಿ ಸಂಸಾರತ್ಯಾಗ ಮಾಡಿದ್ದನೆಂದು. ಆಗ ರೈತನೆಂದ, 'ಹುಚ್ಚಿ, ಯಾರಿಗೆ ವೈರಾಗ್ಯ ಉಂಟಾಗುತ್ತದೋ ಅವನು ಕೊಂಚ ಕೊಂಚವಾಗಿ ಸಂಸಾರವನ್ನು ಬಿಡುತ್ತಾನೇನು?' ಹೀಗೆಂದ ರೈತ ಗೃಹತ್ಯಾಗ ಮಾಡಿಬಿಟ್ಟ. ಇವನು (ಪತ್ರ ಬರೆದವ) ಸುಮ್ಮನೆ ಹೀಗೆ ಹೇಳುತ್ತಿದ್ದಾನೆ.''

ರೈತನೊಬ್ಬ ರಾತ್ರಿ ಕನಸನ್ನು ಕಂಡ – ಅವನಿಗೆ ಏಳು ಮಂದಿ ಮಕ್ಕಳಿದ್ದರಂತೆ. ಎಚ್ಚರವಾದ ಮೇಲೆ ನೋಡಿದರೆ ಯಾರೂ ಇಲ್ಲ. ಇತ್ತ ಅದೇದಿನ ನಿಜವಾಗಿಯೂ ಒಬ್ಬ ಮಗ ಸತ್ತುಹೋಗಿದ್ದ. ಯಾರಿಗಾಗಿ ಅಳಬೇಕು? ಈ ಒಬ್ಬ ಮಗನಿಗಾಗಿಯೋ ಅಥವಾ ಆ ಏಳುಜನ ಮಕ್ಕಳಿಗಾಗಿಯೊ? ಸ್ವಪ್ನ ಸತ್ಯವೋ, ಅಥವಾ ಜಾಗ್ರತ್ ಸತ್ಯವೊ? ಸ್ವಪ್ನದಲ್ಲಿ ಕಂಡ ಏಳುಮಂದಿ ಮಕ್ಕಳು ಮಿಥ್ಯೆಯಾದರೆ, ಜಾಗ್ರದವಸ್ಥೆಯ ಒಬ್ಬ ಮಗನೂ ಮಿಥ್ಯೆಯೇ. ಇದನ್ನು ಯೋಚಿಸುತ್ತಿದ್ದಂತೆ ಅವನಿಗೆ ವೈರಾಗ್ಯ ಹುಟ್ಟಿ, ಮನೆ ಬಿಟ್ಟು ನಡೆದ.

ಇನ್ನೊಬ್ಬ ಬರೆದಿದ್ದಾನೆ: ಮದುವೆಯಾಗುವುದೆ? ಬೇಡವೆ? ''ಅಯ್ಯಾ! ನಾನು ಹೇಳುತ್ತೇನೆ – ನೀನು ವಿವಾಹವಾಗು! 'ತಾಯಿ ಹೇಳುತ್ತಾಳೆ, ಅಣ್ಣ ಹೇಳುತ್ತಾನೆ' – ಇವನಿಗೆ ಒಂದು ಚೂರೂ ಇಚ್ಛೆಯಿಲ್ಲ ಎಂಬಂತೆ ಬರೆದಿದ್ದಾನೆ. ಅವನು ಖಂಡಿತವಾಗಿಯೂ ಮದುವೆಯಾಗುತ್ತಾನೆ. ಇಲ್ಲದಿದ್ದರೆ ಬರೆಯುವುದಕ್ಕೇನಿದೆ? ನಾನು ಬೇಡ ಎಂದರೆ ಅವನು ಮದುವೆಯಾಗಲಾರನೆ?''

ಠಾಕೂರರ ಜಯಂತಿ ಉತ್ಸವ ಹತ್ತಿರ ಬರುತ್ತಿದೆ. ಉತ್ಸವವು ನಿರ್ವಿಘ್ನವಾಗಿ ಹೇಗೆ ನೆರವೇರುವುದೆಂದು ಬಾಬಾ ಸರ್ವದಾ ಚಿಂತಿಸುತ್ತಿದ್ದಾರೆ. ''ಏನು ಮಾಡುವುದೆಂದು ಆಲೋಚಿಸುತ್ತಿದ್ದೇನೆ. ಸು– ಗೆ ಯಾವ ಕೆಲಸವನ್ನೊಪ್ಪಿಸಲಿ? ಠಾಕೂರರು ಸಂತೋಷದ ಧ್ವನಿಯಿಂದ, 'ಮಹೋತ್ಸವಕ್ಕೆ ಸಾಮಾನು ಕೊಂಡುಕೋ' ಎಂದಂತಿತ್ತು. ನಿಜ ಹೇಳುತ್ತೇನೆ, ಮೊದಲಿಗೆ, 'ನಾನೇ ಹೀಗೆಲ್ಲ ಭಾವಿಸುತ್ತಿದ್ದೇನೆ' ಎಂದುಕೊಂಡೆ. ನಾನೇ ಹೇಳುತ್ತಿದ್ದೇನೆ – ಸ್ವಲ್ಪ soliloquy (ಸ್ವಗತ ಮಾತು) ಎಂಬಂತಿತ್ತು. ಕೊನೆಗೆ ಸ್ಪಷ್ಟವಾಗಿ ಕೇಳಿದೆ, ಠಾಕೂರರೇ ಹಾಗೆ ಹೇಳುತ್ತಿದ್ದಾರೆ!

''ಠಾಕೂರರನ್ನು ನಾನು ಸ್ವಪ್ನದಲ್ಲಿ ಹೆಚ್ಚಾಗಿ ನೋಡುತ್ತಿಲ್ಲ. ಸ್ವಾಮೀಜಿ ಹಾಗು ಮಹಾರಾಜ್(ಬ್ರಹ್ಮಾನಂದರು)ರನ್ನು ನಡುನಡುವೆ ನೋಡುತ್ತೇನೆ. ಆದರೆ ಯಾವಾಗ ಗಾಢವಾಗಿ ಚಿಂತಿಸುತ್ತೇನೊ ಆಗ (ಠಾಕೂರರನ್ನು) ನೋಡುತ್ತೇನೆ. ಮಂಗಳಾರತಿಯ ವಿಚಾರ ಯೋಚಿಸುತ್ತಿದ್ದೆ, 'ಅದನ್ನು ಯಾರು ಮಾಡುವುದು? ಹೇಗೆ ಮಾಡುವುದು?' ಎಂದೆಲ್ಲ. ಸ್ವಪ್ನದಲ್ಲಿ ಠಾಕೂರರು ಬಂದು ಹೇಳಿದರು, 'ಹೆಚ್ಚೇನೂ ಮಾಡಬೇಕಾಗಿಲ್ಲ, ಒಂದು ಅಗರಬತ್ತಿ ಹಚ್ಚಿದರೂ ಸಾಕು' ಅಂತ.

''ಠಾಕೂರರ ಆ ಮೂರ್ತಿಯನ್ನು ಸ್ಪಷ್ಟವಾಗಿ ನೋಡಿದೆ – ಅದೇ ದಕ್ಷಿಣೇಶ್ವರದ ಕೋಣೆ, ಮಂಚ ಎಲ್ಲವೂ. ಅವರಿಗೆ ಬೇಕಾದದ್ದನ್ನು ಅವರೇ ಹೊಂದಿಸಿಕೊಳ್ಳುತ್ತಾರೆ. ನೋಡಿದೆಯಲ್ಲ, ಇಂದು ಸಿಹಿತಿಂಡಿ ಇರಲಿಲ್ಲ. ಏನು ಮಾಡುವುದೆಂದು ಚಿಂತಿಸುತ್ತಾ ಇದ್ದೆ. ಈ ರೀತಿ ಎಂದೂ ಆಗದು ಅಂತ. ಹಠಾತ್ತಾಗಿ ನೋಡಿದೆ – ಎಲ್ಲಿಂದಲೋ ಬಂದು ಬಿಟ್ಟಿತು! ಎಲ್ಲಾ ಒಳ್ಳೊಳ್ಳೆಯ ಸಿಹಿತಿಂಡಿಗಳು. ಇದನ್ನು ನಾನು ಅನೇಕ ವೇಳೆ ನೋಡಿದ್ದೇನೆ.'' *

*(ಮುಂದುವರಿಯುವುದು)*

ಭಾಗ ೩

# ಸ್ವಾಮಿ ಪ್ರೇಮಾನಂದರು

ಸ್ವಾಮಿ ಅಶೋಕಾನಂದ

ಅನುವಾದ: ಡಾ. ಇ. ವಸಂತಕುಮಾರ್



ಇಷ್ಟೇ ಅಲ್ಲದೆ, ಸ್ವಾಮಿ ವಿವೇಕಾನಂದರು ಭಾರತದ ಆರ್ಷೇಯ ಸಂಪ್ರದಾಯಗಳಿಗೆ ವಿರೋಧವಾಗಿ ಹೋಗುತ್ತಿರುವರು ಎಂದು ಅವರಿಗೆ ಅನಿಸಿತು. ಭಾರತದಲ್ಲಿ ಸಮಾಜದ ಭೌತಿಕ ಆವಶ್ಯಕತೆಗಳನ್ನು ಪೂರೈಸುವುದು ಆ ಸಮಾಜದ ಜನರ ಧರ್ಮವಾಗಿದೆ. ಅತ್ತ ಸಂನ್ಯಾಸಿಗಳ ಕರ್ತವ್ಯ, ಉನ್ನತ ಆಧ್ಯಾತ್ಮಿಕ ಸತ್ಯಗಳನ್ನು ಬೋಧಿಸುವುದು ಮತ್ತು ಪ್ರತಿಪಾದಿಸುವುದು. ಆದರೆ ಇಲ್ಲಿ ಸ್ವಾಮಿ ವಿವೇಕಾನಂದರು ಸಂನ್ಯಾಸಿಗಳನ್ನು ಎಲ್ಲ ಬಗೆಯ ಕೆಲಸಗಳಲ್ಲಿ – ವಿದ್ಯಾಭ್ಯಾಸ, ಆಸ್ಪತ್ರೆ, ಪರಿಹಾರ ಕಾರ್ಯಗಳಲ್ಲಿ ತೊಡಗುವಂತೆ ಹೇಳುತ್ತಿದ್ದರು. ಸ್ವಾಮಿ ವಿವೇಕಾನಂದರು ಪಶ್ಚಿಮ ದೇಶಗಳಲ್ಲಿರುವಾಗಲೇ ಶ್ರೀರಾಮಕೃಷ್ಣರ ಇತರ ಶಿಷ್ಯರು ತಮ್ಮ ಸಂದೇಹಗಳನ್ನು ಬರೆದು ತಿಳಿಸಲು ಹಿಂದೆಗೆಯಲಿಲ್ಲ. ಸ್ವಾಮೀಜಿಯವರು ಭಾರತಕ್ಕೆ ಹಿಂದಿರುಗಿದ ಮೇಲೆ ಅವರಲ್ಲಿ ಕೆಲವರು ಈ ವಿಷಯವಾಗಿ ಮಾತನಾಡಿದರು. ಸ್ವಾಮೀಜಿಯವರ ಬೋಧನೆಗಳು ಯಾರಿಗೂ ಕೋಪ ಅಥವಾ ಬೇಸರವನ್ನುಂಟು ಮಾಡಲಿಲ್ಲ, ಆದರೆ ಖಂಡಿತವಾಗಿಯೂ ಆತಂಕವನ್ನುಂಟುಮಾಡಿತು. ಶ್ರೀರಾಮಕೃಷ್ಣರ ಗೃಹಸ್ಥ ಶಿಷ್ಯರಾದ ಗಿರೀಶ್ ಘೋಷರು ಬೇಲೂರು ಮಠದಲ್ಲಿದ್ದ ಸ್ವಾಮಿಗಳೊಬ್ಬರಿಗೆ ಬರೆದ ಪತ್ರವೊಂದನ್ನು ನಾನು ಓದಿರುವೆನು. ನಿಮ್ಮಲ್ಲಿ ಅನೇಕರಿಗೆ ತಿಳಿದಿರುವಂತೆ ಗಿರೀಶ್ ಘೋಷರು ಕಲ್ಕತ್ತೆಯ ಒಬ್ಬ ಪ್ರಸಿದ್ಧ ನಟರು, ನಿರ್ಮಾಪಕರು, ನಾಟಕರಂಗದ ನಿರ್ವಾಹಕರು ಮತ್ತು ನಾಟಕ ರಚನಕಾರರು. ಸ್ವಾಮಿ ವಿವೇಕಾನಂದರು ಅವರನ್ನು ಬಹಳ ಪ್ರೀತಿಸುತ್ತಿದ್ದರು ಮತ್ತು ಗೌರವಿಸುತ್ತಿದ್ದರು. ಶ್ರೀರಾಮಕೃಷ್ಣರ ಕೆಲವು ಸಂನ್ಯಾಸೀ ಶಿಷ್ಯರು, ಸ್ವಾಮೀಜಿಯವರು ಶ್ರೀರಾಮಕೃಷ್ಣರಲ್ಲಿ ನಂಬಿಕೆಯನ್ನು ಕಳೆದುಕೊಂಡಿರುವರೇನೊ, ಪರೀಕ್ಷಿಸಿ ಎಂದು ಅವರಿಗೆ ಹೇಳಿದ್ದಂತೆ ಕಾಣುವುದು. ಇದಕ್ಕೆ ಉತ್ತರವಾಗಿ ಗಿರೀಶರು, ''ಇಲ್ಲ, ಅವರು ಬದಲಾಗಿಲ್ಲ; ಹಾಗೆಯೇ ಇರುವರು. 'ಆವಶ್ಯಕತೆ ಬಂದರೆ ಶ್ರೀರಾಮಕೃಷ್ಣರಿಗಾಗಿ ಈ ಕ್ಷಣದಲ್ಲಿ ನನ್ನ ಪ್ರಾಣವನ್ನೇ ಕೊಡುವೆ. ಇದೇ ಕ್ಷಣ ಕೊಡುವೆ!' ಎಂದು ಅವರು ಹೇಳಿದರು. ಅವರಿಗೆ ಅಂತಹ ಶ್ರದ್ಧೆ ಇದೆ'' ಎಂದು ಬರೆದರು. ಶ್ರೀರಾಮಕೃಷ್ಣರ ಇತರ ಶಿಷ್ಯರ ಮನಸ್ಸಿನಲ್ಲಿ ಎಂತಹ ಅನುಮಾನ ಕಾಡುತ್ತಿತ್ತು ಎಂಬುದನ್ನು ಇದು ತೋರಿಸಿಕೊಟ್ಟಿತು.

ಸ್ವಾಮಿ ವಿವೇಕಾನಂದರ ಕಾರ್ಯಕ್ರಮ ಸರಿಯಾಗಿದೆಯೇ ಇಲ್ಲವೇ ಎಂದು ಸಂದೇಹಿಸಿದವರಲ್ಲೊಬ್ಬರು ಸ್ವಾಮಿ ಪ್ರೇಮಾನಂದರು. ಅವರು ತಮ್ಮ ಮನಸ್ಸಿನಲ್ಲಿ ಅಸಮಾಧಾನಗೊಂಡರು ಎಂದು ನನಗನಿಸುವುದು. ತಮ್ಮ ಹಿರಿಯ ಸಹೋದರನೊಂದಿಗೆ ತಮಗಿದ್ದ ಅಸಮ್ಮತಿಯನ್ನು ಮನಸ್ಸಿನಲ್ಲಿ ಇಟ್ಟುಕೊಳ್ಳುವುದು ಅವರಿಗೆ ಸ್ವಲ್ಪವೂ ಇಷ್ಟವಿರಲಿಲ್ಲ. ಆದರೂ ಅದು ಇತ್ತು, ಏಕೆಂದರೆ ಸ್ವಾಮಿ ವಿವೇಕಾನಂದರು ೧೮೯೭ರ ಪ್ರಾರಂಭದಲ್ಲಿ ಕಲ್ಕತ್ತೆಗೆ ಹಿಂತಿರುಗಿದಾಗ ಅವರನ್ನು ಸ್ವಾಗತಿಸಲು ಅವರು ಹೋಗಿರಲಿಲ್ಲ. ಸ್ವಾಮಿ ವಿವೇಕಾನಂದರು ಇಂತಹ ದಿನ ಕಲ್ಕತ್ತೆಗೆ ಬರುವರು ಮತ್ತು ಅವರಿಗೆ ಒಂದು ಸ್ವಾಗತ ಸಮಾರಂಭ ಇರುವುದು ಎಂಬುದು ಅವರಿಗೆ ತಿಳಿದಿತ್ತು. ನಾನು ತಿಳಿಸಿದಂತೆ, ಅವರು ಸ್ವಾಮೀಜಿಯವರನ್ನು ಸ್ವಾಗತಿಸಲು ಸರಿಯಾದ ಸಮಯಕ್ಕೆ ಬರಬಹುದಾಗಿತ್ತು. ಆದರೆ ಅವರು ಹಾಗೆ ಮಾಡಲಿಲ್ಲ. ಅದಕ್ಕೆ ಬದಲಾಗಿ, ಸ್ವಾಮಿ ಪ್ರೇಮಾನಂದರು ಶ್ರೀಶಾರದಾದೇವಿಯವರನ್ನು ನೋಡಲು ಜಯರಾಮಬಾಟಿಗೆ ಹೋದರು. ಆ ಸಮಯದಲ್ಲಿ ಅವರಿಗೆ ಶ್ರೀಮಾತೆಯವರನ್ನು ನೋಡುವ ತೀವ್ರ ಬಯಕೆ ಉಂಟಾಗಿದ್ದಿರಬಹುದು; ಆ ಬಗ್ಗೆ ನಾವು ಏನನ್ನೂ ಹೇಳಲಾಗದು. ಆದರೆ ವಾಸ್ತವಾಂಶವೆಂದರೆ, ಅವರು ಕಲ್ಕತ್ತೆಗೆ ಹೋಗಲಿಲ್ಲ. ಐದಾರು ದಿನಗಳಾದ ನಂತರವೇ ಸ್ವಾಮೀಜಿಯವರನ್ನು ಸ್ವಾಗತಿಸಲು ಅವರು ಮಠಕ್ಕೆ ಹೋದುದು.

ಸ್ವಾಮೀಜಿಯವರು ಹಿಂತಿರುಗಿದಾಗ ಅವರು ಪತ್ರಗಳಲ್ಲಿ ಯಾವ ಆಲೋಚನೆಗಳನ್ನು ವ್ಯಕ್ತಪಡಿಸಿದ್ದರೋ ಅವು ಯಾವುವೂ ಅನುಷ್ಠಾನಕ್ಕೆ ಬಂದಿರಲಿಲ್ಲ. ಅವರು ತಮ್ಮ ಗುರುಭಾಯಿಗಳ ಮನಸ್ಸನ್ನು ಇನ್ನೂ ಒಲಿಸಬೇಕಾಗಿತ್ತು. ನೀವು ಆಧ್ಯಾತ್ಮಿಕ ವ್ಯಕ್ತಿಯೊಬ್ಬರಿಗೆ ಯಾವುದಾದರೊಂದು ಭಾವನೆಯನ್ನು ತಿಳಿಸಿ ಅವರನ್ನು ಒಪ್ಪಿಸಲು

ಪ್ರಯತ್ನಿಸಿನೋಡಿ. ಅವರಂತಹ ಗಟ್ಟಿಮನಸ್ಸಿನವರು ಬೇರೊಬ್ಬರನ್ನು ಕಾಣಲಾರಿರಿ. ಏಕೆಂದರೆ ಅವರೂ ಸತ್ಯವನ್ನು ಕಂಡಿರುವವರು. ಅವರಲ್ಲಿ ಎಲ್ಲರೂ ಮಾನವಕೋಟಿಯ ಬಗ್ಗೆ ಯೋಚಿಸಿರುವುದಿಲ್ಲ; ಎಲ್ಲರೂ ಆ ಯುಗದ ಆವಶ್ಯಕತೆಯನ್ನು ಕುರಿತು ಯೋಚಿಸಿರುವುದಿಲ್ಲ. ನಾವು ಬಹುಶಃ ನಮ್ಮ ಕಾಲದ ಬಗ್ಗೆ ಯೋಚಿಸಬಹುದು, ನಮ್ಮ ಪೀಳಿಗೆಯ ಬಗ್ಗೆ ಯೋಚಿಸಬಹುದು. ಆದರೆ ಸ್ವಾಮಿ ವಿವೇಕಾನಂದರು, ತಮ್ಮ ಚಿಂತನೆಗಳು ಪ್ರಪಂಚದಲ್ಲಿ ಸಾವಿರದ ಐನೂರು ವರ್ಷಗಳ ಕಾಲ ಪ್ರಚಲಿತವಾಗಿರುವುವು ಎಂದಿದ್ದಾರೆ.

ಆಗ ಒಂದು ವಿಷಯ ಸಹಾಯಕ್ಕೆ ಬಂತು. ಶ್ರೀರಾಮಕೃಷ್ಣರು ಕಾಲವಾಗುವ ಮುನ್ನ ತಮ್ಮ ಶಿಷ್ಯರೆಲ್ಲರಿಗೂ ಸ್ವಾಮಿ ವಿವೇಕಾನಂದರು ತೋರಿದ ಮಾರ್ಗದಲ್ಲಿ ನಡೆಯುವಂತೆ ಹೇಳಿದ್ದರು. ''ಅವನನ್ನು ಅನುಸರಿಸಿ. ನೀವು ನನ್ನನ್ನು ಅನುಸರಿಸುವಂತೆ ಅವನನ್ನು ಅನುಸರಿಸಿ'' ಎಂದು ಅವರು ಹೇಳಿದ್ದರು. ಆದ್ದರಿಂದ ಕೆಲವರಲ್ಲಿ ಅಭಿಪ್ರಾಯಭೇದವಿದ್ದರೂ, ಸ್ವಾಮೀಜಿಯವರು ವಿಧಿಸಿದ ಕಾರ್ಯಗಳನ್ನು ಮಾಡುವುದರಲ್ಲಿ ಅವರೆಲ್ಲರೂ ಒಂದಾಗಿದ್ದರು. ಅವರೆಂದೂ ಆಗದು ಎನ್ನಲಿಲ್ಲ. ಅದೊಂದು ಅಸಾಧಾರಣವಾದ ಸಾಧನೆಯಾಗಿತ್ತು. ಅವರೆಲ್ಲರೂ ಮಹಾತ್ಮರಾಗಿದ್ದರು, ಆಧ್ಯಾತ್ಮಿಕ ವೀರರಾಗಿದ್ದರು; ಅವರೆಲ್ಲರಿಗೂ ತಮ್ಮದೇ ಆದ ಆಲೋಚನೆಗಳಿದ್ದವು, ತಮ್ಮದೇ ಆದ ಮಾರ್ಗಗಳಿದ್ದವು. ಆದರೂ ಅವರು ತಮ್ಮಲ್ಲಿ ಒಬ್ಬರ ಆದೇಶವನ್ನೇ ಪಾಲಿಸಿದರು. ಎಲ್ಲರೂ ಸ್ವಾಮೀಜಿಯವರನ್ನು ವಿಧೇಯತೆಯಿಂದ ಹಿಂಬಾಲಿಸಿದರು. ಇದಕ್ಕೆ ನಿಜವಾಗಿಯೂ ಬೇಕಾದುದೆಂದರೆ – ಅಹಂಕಾರಶೂನ್ಯತೆ.

ಅವು ಉತ್ಸಾಹಭರಿತವಾದ ದಿನಗಳು. ಹೊಸಬರು ಸಂಘವನ್ನು ಸೇರುತ್ತಿದ್ದರು. ಕಲ್ಕತ್ತೆಯಿಂದ ಕೆಲವು ಮೈಲಿ ದೂರವಿದ್ದ ಬೇಲೂರಿನಲ್ಲಿ ಒಂದು ಮಠವನ್ನು ನಿರ್ಮಿಸಲಾಗುತ್ತಿತ್ತು. ಸ್ವಾಮೀಜಿ ಭಾರತದ ಕಾರ್ಯಗಳನ್ನು ಪ್ರಾರಂಭಿಸುತ್ತಿದ್ದರು. ಎಲ್ಲವೂ ಅವರ ಯೋಜನೆಯಂತೆ ನಿಯೋಜಿತವಾಗುತ್ತಿತ್ತು. ಅವರು ನಿರ್ದಾಕ್ಷಿಣ್ಯವಾಗಿ ಕೆಲಸ ಮಾಡಿಸುತ್ತಿದ್ದರು. ಆದ ಕಾರಣ, ಅವರ ಮಾತು ನೇರವಾಗಿರುತ್ತಿತ್ತು. ತಾವು ಹೆಚ್ಚುಕಾಲ ಬದುಕಿರುವುದಿಲ್ಲವೆಂದು ಅವರಿಗೆ ತಿಳಿದಿತ್ತು. ಆದ್ದರಿಂದ ಅವರ ಚಹರೆಯಲ್ಲಿ ಸ್ವಲ್ಪ ಅವಸರ ಕಾಣುತ್ತಿತ್ತು. ತಮ್ಮ ಸೋದರ ಸಂನ್ಯಾಸಿಗಳನ್ನು ಮತ್ತು ಶಿಷ್ಯರನ್ನು ಸಾಧ್ಯವಾದಷ್ಟು ಬೇಗ ತರಪೇತು ಮಾಡಬೇಕೆಂದು ಅವರು ಇಚ್ಛಿಸುತ್ತಿದ್ದರು. ಆವಶ್ಯಕತೆಯಿದ್ದಾಗ ಅವರನ್ನು ಕಠಿಣವಾಗಿ ದೂಷಿಸುತ್ತಿದ್ದರು. ಶ್ರೀರಾಮಕೃಷ್ಣರ ಮಹಾನ್ ಶಿಷ್ಯರು ಸ್ವಾಮೀಜಿಯವರಿಂದ ಪಡೆದಂತಹ ಕಠಿಣ ತರಬೇತಿಯನ್ನು ತಮ್ಮ ಗುರುಗಳಿಂದಲೇ ಪಡೆದಿರಲಿಲ್ಲವೆಂದು ತೋರುವುದು. ಆದರೆ ಸ್ವಾಮೀಜಿಯವರು ಅವರನ್ನೆಲ್ಲ ಹೃತ್ಪೂರ್ವಕವಾಗಿ ಪ್ರೀತಿಸುತ್ತಿದ್ದರು. ಅವರಲ್ಲಿ ಈ ಎರಡು ಗುಣಗಳ ಅದ್ಭುತ ಸಂಮಿಶ್ರಣವಿತ್ತು. ಅತ್ಯಂತ ಕಠೋರವಾದ ಸತ್ಯವನ್ನು ಅವರು ನಿಷ್ಠುರವಾಗಿ ಹೇಳಿ, ಪ್ರಾಣ ಹೋಗುವಂತೆ ಬಯ್ಯುತ್ತಿದ್ದರು. (ಬಯ್ಯುವುದರಲ್ಲಿ ಅವರಿಗೆ ತಮ್ಮದೇ ಆದ ಶೈಲಿ ಇರುತ್ತಿತ್ತೆಂದು ಮಠದಲ್ಲಿ ಹೇಳುತ್ತಿದ್ದರು; ಅಂತಹ ಪದಗಳು, ಪದಪುಂಜಗಳು ಅವರಿಗೆ ಎಲ್ಲಿಂದ ಸಿಗುತ್ತಿತ್ತೊ ಯಾರಿಗೂ ತಿಳಿಯುತ್ತಿರಲಿಲ್ಲ. ಆದರೆ ಅವು ಅವರ ಹೃದಯಕ್ಕೆ ನಾಟುತ್ತಿದ್ದುವು.) ಅವರ ಮತ್ತೊಂದು ಗುಣವೆಂದರೆ, ಅವರು ತಮ್ಮ ಗುರುಭಾಯಿಗಳನ್ನು ಹೃದಯಾಂತರಾಳದಿಂದ ಅತ್ಯಂತ ಪ್ರೀತಿಸುತ್ತಿದ್ದರು. ಅಂತಹ ಪ್ರೀತಿ ದುರ್ಲಭ ಮತ್ತು ಅಮೂಲ್ಯವಾಗಿತ್ತು.

ಸ್ವಾಮಿ ವಿವೇಕಾನಂದರು ಪಶ್ಚಿಮ ದೇಶಗಳಿಂದ ಕಲ್ಕತ್ತೆಗೆ ಹಿಂತಿರುಗಿದ ನಂತರ ಸ್ವಾಮಿ ಪ್ರೇಮಾನಂದರ ಕಡೆಗೆ ಹೆಚ್ಚು ಗಮನ ಕೊಡಲಾರಂಭಿಸಿದರು. ಯಾವಾಗಲೂ ಅವರನ್ನು ಕರೆಯುತ್ತಿದ್ದರು, ಅವರನ್ನು ಟೀಕಿಸುತ್ತಿದ್ದರು, ತಪ್ಪು ಕಂಡುಹಿಡಿಯುತ್ತಿದ್ದರು ಮತ್ತು ಮೂದಲಿಸುತ್ತಿದ್ದರು. ಸ್ವಾಮೀಜಿ ಅವರಿಗೆ ಕಠಿಣವಾದ ತರಪೇತಿ ಕೊಟ್ಟರು. ಒಂದು ಸಂಜೆ ಸ್ವಾಮಿ ಪ್ರೇಮಾನಂದರು ಪೂಜೆಯಾದ ನಂತರ ಸ್ವಾಮೀಜಿಯವರ ಬಳಿ ಬಂದು ಮೊದಲ ಬಾರಿ ಅವರನ್ನು ಕಂಡು, ''ಸೋದರ, ಇಂದು ನೀನು ಹೇಗಿರುವೆ? ಎಂದು ಕೇಳಿದರು. ಆ ಸಮಯದಲ್ಲಿ ಸ್ವಾಮೀಜಿಯವರ ಆರೋಗ್ಯ ಏನೇನೂ ಚೆನ್ನಾಗಿರಲಿಲ್ಲ. ಸ್ವಾಮೀಜಿ ಉತ್ತರಿಸುತ್ತ, ''ಓ, ನನ್ನನ್ನು ವಿಚಾರಿಸಲು ಈಗ ಬಂದೆಯಾ! ನಾನು ಸಾಯುತ್ತಿದ್ದರೂ ನೀನು ನನ್ನ ಕಡೆ ತಿರುಗಿಯೂ ನೋಡುವುದಿಲ್ಲ! ಇರಲಿ, ಈ ಬೀಸಣಿಗೆಯನ್ನು ತಗೊ, ನನಗೆ ಬೀಸು'' ಎಂದರು. ಆಗ ಬಹಳ ಸೆಖೆ ಇತ್ತು. ಸ್ವಾಮೀಜಿ ಯವರಿಗೆ ಜ್ವರ ಬಂದಂತಿತ್ತು. ಸ್ವಾಮಿ ಪ್ರೇಮಾನಂದರು ಬೀಸಣಿಗೆ ತೆಗೆದುಕೊಂಡು ಗಾಳಿ ಹಾಕಲಾರಂಭಿಸಿದರು. ಅವರು ಇಡೀ ರಾತ್ರಿ ಗಾಳಿ ಬೀಸಿದರು. ಸ್ವಾಮೀಜಿ ಒಮ್ಮೆಯೂ ಅವರ ಕಡೆ ನೋಡಲಿಲ್ಲ, ''ನೀನು ದಣಿದಿರಬೇಕು, ಹೋಗಿ ಮಲಗು'' ಎಂದು ಹೇಳಲೇ ಇಲ್ಲ. ಇಡೀ ರಾತ್ರಿ ಗಾಳಿ ಹಾಕುವಂತೆ ಮಾಡಿದರು. ಮುಂಜಾನೆ ಅವರ ಕಡೆ ನೋಡಿ, ''ಹೋಗು; ದೇವಸ್ಥಾನಕ್ಕೆ ಹೋಗು'' ಎಂದರು. ಸ್ವಾಮಿ ಪ್ರೇಮಾನಂದರಿಗೆ ಬೇಲೂರುಮಠದ ದೇವಸ್ಥಾನದ ಜವಾಬ್ದಾರಿ ಸೇರಿತ್ತು. ಬೆಳಗಿನ ಜಾವ ದೇವಸ್ಥಾನವನ್ನು ತೆರೆಯುವುದು ಅವರ ಕೆಲಸವಾಗಿತ್ತು. ಆದ್ದರಿಂದ ಅವರು ಅದನ್ನು ಮಾಡಿದರು. ಯಾವುದೇ ಗೊಣಗಾಟವಿಲ್ಲ, ದೂರಿಲ್ಲ, ಒಂದು ಕ್ಷಣವೂ ಮನಸ್ಸಿನಲ್ಲಿ ಬೇಜಾರು ಮಾಡಿಕೊಳ್ಳಲಿಲ್ಲ. ಗಮನಿಸಿ, ಸ್ವಾಮಿ ಪ್ರೇಮಾನಂದರೇ ಒಬ್ಬರು ಮಹಾಪುರುಷರಾಗಿದ್ದರು; ಆದರೂ ಅವರು ವಿಧೇಯ ಶಿಷ್ಯನಂತೆ ಸ್ವಾಮಿ ವಿವೇಕಾನಂದರ ಸೇವೆ ಮಾಡಿದರು.

ಹಿರಿಮೆ ಮತ್ತು ಶಕ್ತಿ ಇಂತಹ ಕೆಲಸಗಳಿಂದ ಬರುತ್ತವೆ; ದರ್ಶನ, ಅತೀಂದ್ರಿಯ ಅನುಭವ ಮತ್ತು ಭಾವಗಳಿಂದಲ್ಲ. ಇಂತಹ ನಿಃಸ್ವಾರ್ಥಭಾವದ, ನಿಷ್ಠೆಯ ಕೆಲಸಗಳನ್ನು ಮಾಡುವ ಚಾರಿತ್ರ್ಯ ಮತ್ತು ಮನಃಸ್ಥಿತಿಯೇ ಮುಖ್ಯವಾದುದು. ಶ್ರೇಷ್ಠ ಸ್ವಾಮಿಗಳಿಂದ ನಾವು ಪಡೆದ ಆಸ್ತಿಯೇ ಈ ಆಧ್ಯಾತ್ಮಿಕ ಪರಂಪರೆ. ಇದೇ ನಮ್ಮ ಸಂಪತ್ತು.

ಶ್ರೀರಾಮಕೃಷ್ಣರ ಶ್ರೇಷ್ಠ ಶಿಷ್ಯರೆಲ್ಲರೂ – ಸ್ವಾಮಿ ಬ್ರಹ್ಮಾನಂದರು, ಸ್ವಾಮಿ ಯೋಗಾನಂದರು, ಸ್ವಾಮಿ ಪ್ರೇಮಾನಂದರು, ಸ್ವಾಮಿ ಶಿವಾನಂದರು, ಸ್ವಾಮಿ ಶಾರದಾನಂದರು – ಪ್ರತಿಯೊಬ್ಬರೂ ಸ್ವಾಮಿ ವಿವೇಕಾನಂದರಿಂದ ಕಠಿಣ ಶಿಕ್ಷಣವನ್ನು ಪಡೆದರು. ಉದಾಹರಣೆಗೆ, ಪ್ರತಿದಿನ ಬೆಳಗ್ಗೆ ನಾಲ್ಕು ಗಂಟೆಗೆ ಎದ್ದು ಶುಚಿರ್ಭೂತರಾಗಿ ಮಂದಿರಕ್ಕೆ ಹೋಗಿ, ಎರಡು ಮೂರು ಗಂಟೆಗಳ ಕಾಲ ಧ್ಯಾನ ಮಾಡಬೇಕೆಂದು ಸ್ವಾಮೀಜಿ ನಿಯಮ ಮಾಡಿದರು. ಈ ಹಿರಿಯ ಸ್ವಾಮಿಗಳು ಇಂತಹ ನಿಯಮವನ್ನು ಪಾಲಿಸಬೇಕಾದ ಆವಶ್ಯಕತೆ ಇರಲಿಲ್ಲ. ಒಂದು ಬೆಳಗ್ಗೆ ಸ್ವಾಮಿ ಶಿವಾನಂದರು ಮಂದಿರಕ್ಕೆ ಹೋಗಲಿಲ್ಲ. ಸ್ವಾಮಿ ವಿವೇಕಾನಂದರು ಹೇಳಿದರು, ''ಸರಿ, ನೀನು ಮಂದಿರಕ್ಕೆ ಹೋಗಬೇಕಾದುದಿಲ್ಲ. ಆದರೆ ಕಿರಿಯ ಸಂನ್ಯಾಸಿಗಳಿಗೆ ಒಂದು ಮೇಲ್ಪಂಕ್ತಿಯನ್ನು ಇಡುವುದಕ್ಕಾಗಿ ನೀನು ಈ ನಿಯಮವನ್ನು ಅನುಸರಿಸಬೇಕು.'' ಅನೇಕ ವರ್ಷಗಳ ನಂತರ ಸ್ವಾಮಿ ಶಿವಾನಂದರು ಪ್ರತಿದಿನ ಬೆಳಗ್ಗೆ ಮಂದಿರಕ್ಕೆ ಹೋಗಿ ಸ್ವಾಮೀಜಿ ವಿಧಿಸಿದಂತೆ ಧ್ಯಾನ ಮಾಡುತ್ತಿದ್ದುದನ್ನು ನಾನೇ ನೋಡಿದ್ದೇನೆ. ಈ ನಿಯಮವನ್ನು ಅವರು ಜೀವನ ಪರ್ಯಂತ, ತಮ್ಮ ದೇಹ ಸಹಕರಿಸುವವರೆಗೂ, ತಾವು ನಿಸ್ಸಹಾಯಕರಾಗುವವರೆಗೂ ಪಾಲಿಸಿದರು. ಇರಲಿ, ನಾನೀಗ ಹೇಳುತ್ತಿರುವುದು ಸ್ವಾಮಿ ಪ್ರೇಮಾನಂದರನ್ನು ಕುರಿತು.

ಒಮ್ಮೆ ಸ್ವಾಮಿ ವಿವೇಕಾನಂದರಿಗೆ ತಿಳಿಯಿತು, ಸ್ವಾಮಿ ಪ್ರೇಮಾನಂದರು ಮಧ್ಯಾಹ್ನದ ವೇಳೆ ನಿದ್ರಿಸುತ್ತಾರೆ ಎಂದು. ಬಹುಶಃ ಅವರು ರಾತ್ರಿ ನಿದ್ರೆ ಮಾಡಿರಲಿಲ್ಲವೆಂದು ಕಾಣುತ್ತದೆ. ಆದರೆ, ಹಗಲು ಯಾರೂ ನಿದ್ರಿಸಬಾರದೆಂಬ ನಿಯಮವನ್ನು ಸ್ವಾಮೀಜಿ ಮಾಡಿದ್ದರು. ಪ್ರೇಮಾನಂದರು ನಿದ್ರಿಸಿದ ವಿಷಯ ತಿಳಿದ ಕೂಡಲೆ, ಅವರನ್ನು ಎಬ್ಬಿಸಲು ತಮ್ಮ ಶಿಷ್ಯನೊಬ್ಬನನ್ನು ಕಳುಹಿಸಿದರು. ''ಹೋಗು. ಅವನನ್ನು ಹಾಸಿಗೆಯಿಂದ ಎಳೆದು ಹಾಕು. ಕಾಲನ್ನು ಹಿಡಿದು ಎಳೆ'' ಎಂದರು. ಶಿಷ್ಯನು ಸ್ವಾಮೀಜಿ ಹೇಳಿದಂತೆ ಸ್ವಾಮಿ ಪ್ರೇಮಾನಂದರ ಕಾಲು ಹಿಡಿದು ಎಳೆದನು. ''ಇದೇನು ಮಾಡುತ್ತಿರುವೆ? ನಿಲ್ಲಿಸು! ನಿಲ್ಲಿಸು!'' ಎಂದು ಸ್ವಾಮಿ ಪ್ರೇಮಾನಂದರು ಕಿರುಚಿದರು. ಆದರೆ ಶಿಷ್ಯನು ಆಜ್ಞೆಯನ್ನು ಪಾಲಿಸಬೇಕಾಗಿತ್ತು; ಅವನು ನಿಲ್ಲಿಸಲಿಲ್ಲ. ಸ್ವಾಮಿಗಳನ್ನು ಹಾಸಿಗೆಯಿಂದ ನೆಲಕ್ಕೆ ಎಳೆದುಬಿಟ್ಟನು. ಆಗ ಪ್ರೇಮಾನಂದರಿಗೆ ತಿಳಿಯಿತು, ಅದರ ಹಿಂದೆ ಸ್ವಾಮಿ ವಿವೇಕಾನಂದರು ಇದ್ದಾರೆ ಎಂದು. ಆದ್ದರಿಂದ ಅವರು ಏನನ್ನೂ ಹೇಳಲಿಲ್ಲ. ಆದರೆ ಅವರು ಸ್ವಲ್ಪ ಸಮಯದ ನಂತರ ಸ್ವಾಮೀಜಿಯವರ ಹತ್ತಿರ ಹೋದರು. ಆಗ ಸ್ವಾಮೀಜಿ ಬೇಲೂರು ಮಠದ ಎರಡನೆ ಅಂತಸ್ತಿನ ವರಾಂಡದಲ್ಲಿ ನಡೆದಾಡುತ್ತಿದ್ದರು. ಪ್ರೇಮಾನಂದರನ್ನು ಕಂಡ ಕೂಡಲೆ ಸ್ವಾಮೀಜಿ ಅವರನ್ನು ತಬ್ಬಿಕೊಂಡು, ''ತಮ್ಮಾ, ನಮ್ಮ ಗುರುಗಳು ನಿನ್ನನ್ನು ತಮ್ಮ ಪ್ರಾಣದಂತೆ ಪ್ರೀತಿಸುತ್ತಿದ್ದರು. ಆದರೆ, ನಾನು ನಿನ್ನನ್ನು ಹಾಸಿಗೆಯಿಂದ ಎಳೆದು ಹಾಕುವಂತೆ ಹೇಳಿದೆ! ನಾನು ಇಲ್ಲಿ ವಾಸಿಸಲು ಯೋಗ್ಯನಲ್ಲ.'' ಎಂದು ಹೇಳುತ್ತ ಅಳಲಾರಂಭಿಸಿದರು. ಸ್ವಾಮಿ ಪ್ರೇಮಾನಂದರು ಅವರನ್ನು ಸಮಾಧಾನಗೊಳಿಸುತ್ತ, ''ಅಣ್ಣಾ, ಅಳಬೇಡ. ನೀನು ಮಾಡಿದ್ದು ಸರಿ; ನಿಜವಾಗಿಯೂ ಸರಿ'' ಎಂದರು.

ಒಂದು ರಾತ್ರಿ ಸ್ವಾಮಿ ಪ್ರೇಮಾನಂದರನ್ನು ಶ್ರೀರಾಮಕೃಷ್ಣರು ಅನೇಕ ಬಾರಿ ಎಬ್ಬಿಸಿದರಲ್ಲ , ಆ ಘಟನೆಯ ಮಹತ್ವವನ್ನು ಇಲ್ಲಿ ನಿಮಗೆ ನೆನಪಿಸಬೇಕು. ನೋಡಿ, ಅದು ಅವರ ಮನಸ್ಸಿನ ಮೇಲೆ ಅಚ್ಚಳಿಯದ ಪ್ರಭಾವವನ್ನುಂಟುಮಾಡಿತು. ಆದ್ದರಿಂದ ಅವರು ಸ್ವಾಮಿ ವಿವೇಕಾನಂದರ ಎಲ್ಲ ಅಭಿಪ್ರಾಯಗಳನ್ನೂ ಒಪ್ಪದಿದ್ದರೂ, ಅವರಿಗೆ ಸ್ವಾಮೀಜಿಯವರ ಮೇಲೆ ಆಳವಾದ ಪ್ರೀತಿ ಮತ್ತು ಗೌರವಗಳು ಇದ್ದುವು. ಒಮ್ಮೆ ಅವರು ಸ್ವಾಮೀಜಿಯವರಿಗೆ ಹೇಳಿದರು, ''ನೀವು ಮತ್ತು ಶ್ರೀರಾಮಕೃಷ್ಣರು ಬೇರೆ ಎಂದು ಭಾವಿಸಿದಿರಾ? ನಾವು ನಿಮ್ಮನ್ನು ಶ್ರೀರಾಮಕೃಷ್ಣರೆಂದೇ ಭಾವಿಸುತ್ತೇವೆ.''

ಸ್ವಾಮೀಜಿಯವರು ಸ್ವಾಮಿ ಪ್ರೇಮಾನಂದರಿಗೆ ಕಲಿಸಿದ ಮುಖ್ಯವಾದ ವಿಷಯಗಳಲ್ಲೊಂದು, ಬಾಹ್ಯಪೂಜೆಯನ್ನು ಕುರಿತಾದುದು. ನಾನು ನಿಮಗೆ ತಿಳಿಸಿದಂತೆ, ಪ್ರೇಮಾನಂದರು ಮಂದಿರದ ಕೆಲಸವನ್ನು ನೋಡಿಕೊಳ್ಳುತ್ತಿದ್ದರು. ಸಂಜೆಯ ಆರತಿಗೆ ಒಂದು ನಿಗದಿತ ಕಾಲವಿತ್ತು. ಕಿರಿಯ ಸಂನ್ಯಾಸಿಗಳೆಲ್ಲರೂ ಆಗ ಇರಬೇಕಿತ್ತು. ಕೆಲವು ವೇಳೆ ಅವರು ಇತರ ಕೆಲಸಗಳಲ್ಲಿ ತೊಡಗಿರುತ್ತಿದ್ದ ಕಾರಣ ಆರತಿಗೆ ಬರುತ್ತಿರಲಿಲ್ಲ. ಒಂದು ದಿವಸ ಈ ವಿಷಯ ಪ್ರಸ್ತಾಪಕ್ಕೆ ಬಂದಿತು. ಸ್ವಾಮಿ ವಿವೇಕಾನಂದರು ಸ್ವಾಮಿ ಪ್ರೇಮಾನಂದರ ಕಡೆ ತಿರುಗಿ, ''ಬಾಬುರಾಮ್, ದೇವಸ್ಥಾನದಲ್ಲಿ ಗಂಟೆ ಬಾರಿಸಿದರೆ ಅದನ್ನು ಮಾತ್ರ ದೇವರ ಪೂಜೆ ಎಂದು ಭಾವಿಸುತ್ತೀಯಾ? ಈ ಹುಡುಗರು ಧರ್ಮಗ್ರಂಥಗಳನ್ನು ಓದುತ್ತಿದ್ದರೆ ಅವರು ದೇವರನ್ನು ಪೂಜಿಸುತ್ತಿಲ್ಲವೆಂದು ಭಾವಿಸುವೆಯಾ? ಅಷ್ಟು ಪ್ರಾಪಂಚಿಕ ಮನಸ್ಸುಳ್ಳವನಾಗಬೇಡ! ತೋಟದಲ್ಲಿ ಕೆಲವು ತರಕಾರಿಗಳನ್ನು ಬೆಳೆದು ಬಡವರಿಗೆ ಕೊಟ್ಟರೆ ಮಂದಿರದಲ್ಲಿ ಪೂಜೆ ಮಾಡುವ ವ್ಯಕ್ತಿಗಿಂತ ನೀನು ಉತ್ತಮನಾಗುವೆ.'' ಸ್ವಾಮಿ ಪ್ರೇಮಾನಂದರು ಆ ಬುದ್ಧಿವಾದವನ್ನು ಗೌರವದಿಂದ ಪರಿಗಣಿಸಿದರು ಮತ್ತು ಅದರಂತೆ ಮಾಡಿದರು. ಅವರು ತರಕಾರಿಗಳನ್ನು ಬೆಳೆದು ನೆರೆಹೊರೆಯ ಬಡವರಿಗೆ ಕೊಟ್ಟರು. ಅದರಿಂದ ಅವರ ಮನಸ್ಸು ಹಿಂದೆಂದೂ ಅನುಭವಿಸದಂತಹ ಭಾವನೆಯನ್ನು ಅನುಭವಿಸಿತೆಂದು ಅವರೇ ಒಪ್ಪಿಕೊಂಡರು.

ಇಂತಹ ಮತ್ತೊಂದು ಸಂದರ್ಭದಲ್ಲಿ ಮತ್ತೊಂದು ನಾಟಕೀಯವಾದ ಘಟನೆ ನಡೆಯಿತು. ಒಂದು ಮಧ್ಯಾಹ್ನ ಸ್ವಾಮಿ ವಿವೇಕಾನಂದರು ಕಿರಿಯ ಸಂನ್ಯಾಸಿಗಳಿಗೆ ಪಾಠ ಹೇಳುತ್ತಿದ್ದರು. ಅವರಿಗೆ ಪಾಠ ಹೇಳುವುದು, ವಿಚಾರ ವಿಮರ್ಶೆ ಮಾಡುವುದು ಎಂದರೆ ಬಹಳ ಇಷ್ಟ. ಅವರು ಏನನ್ನಾದರು ಪ್ರಾರಂಭಿಸಿದರೆ, ಅವರ ಮನಸ್ಸು ಎಷ್ಟರಮಟ್ಟಿಗೆ ಅದರಲ್ಲೆ ಮುಳುಗಿಹೋಗುತ್ತಿತ್ತೆಂದರೆ, ಅವರಿಗೆ ಸಮಯಕ್ಕೆ ಸರಿಯಾಗಿ ಗಡಿಯಾರದ ಪ್ರಕಾರ ನಿಲ್ಲಿಸಲಾಗುತ್ತಿರಲಿಲ್ಲ. ಆಗ ಮುಸ್ಸಂಜೆಯಾಗಿ ಸಂಜೆಯ ಆರತಿಯ

ಸಮಯವಾಗಿತ್ತು. ಯಾರೂ ಆರತಿಗೆ ಹೋಗಲಿಲ್ಲ. ಸ್ವಾಮಿ ಪ್ರೇಮಾನಂದರು ಅಲ್ಲಿಗೆ ಬಂದು ಕಿರಿಯ ಸಂನ್ಯಾಸಿಗಳಿಗೆ, ''ನೀವು ಏನು ಮಾಡುತ್ತಿರುವಿರಿ? ಆರತಿಗೆ ಬರುವುದಿಲ್ಲವೇ? ತರಗತಿ ಮುಗಿಸಿ ಬನ್ನಿ'' ಎಂದು ಹೇಳಿದರು. ಸ್ವಾಮಿ ವಿವೇಕಾನಂದರು ಬೆಂಕಿಯಂತಾದರು. ''ಬಾಬುರಾಂ, ನಾನಿಲ್ಲಿ ಮಾಡುತ್ತಿರುವುದು ಪೂಜೆಯಲ್ಲವೆಂದು ನಿನ್ನ ಅಭಿಪ್ರಾಯವೆ? ನೀನು ದೇವಸ್ಥಾನದಲ್ಲಿ ಘಂಟೆ ಬಾರಿಸಿದರೆ, ಅದು ಮಾತ್ರ ಪೂಜೆಯೆ?'' ಎನ್ನುತ್ತ ಅವರ ಮೇಲೆ ಕಠೋರ ಶಬ್ದಗಳ ಮಳೆಗರೆದರು. ಸ್ವಾಮಿ ಪ್ರೇಮಾನಂದರು ಅವನತಮುಖರಾಗಿ ಹೊರಟು ಹೋಗಿ ಸಂಜೆಯ ಪೂಜೆ ಮುಗಿಸಿದರು. ನಂತರ ಅವರು ಎಲ್ಲಿಯೂ ಕಾಣಲಿಲ್ಲ. ಮಠದಲ್ಲಿ ಎಲ್ಲಿ ಹುಡುಕಿದರೂ ಅವರ ಸುಳಿವಿರಲಿಲ್ಲ. ಸ್ವಾಮಿ ವಿವೇಕಾನಂದರ ಬೈಗಳಿನಿಂದ ಮನನೊಂದು ಗಂಗಾನದಿಗೆ ಹಾರಿ ಆತ್ಮಹತ್ಯೆ ಮಾಡಿಕೊಂಡಿರಬೇಕೆಂದು ಊಹಿಸಲಾಯಿತು. ಸ್ವಾಮೀಜಿಯವರಿಗೆ ಮನಸ್ಸು ಕೆಟ್ಟುಹೋಗಿತ್ತು. ಅವರು ಶ್ರೀರಾಮಕೃಷ್ಣರ ಮಂದಿರಕ್ಕೆ ಹೋಗಿ ಹೊಸಲಿಗೆ ತಲೆಯನ್ನು ಹಲವು ಸಲ ಬಡಿದುಕೊಂಡು ಅವರ ಕಠೋರ ಮಾತುಗಳಿಗೆ ಕ್ಷಮೆಯನ್ನು ಯಾಚಿಸಿದರು. ಅವರು ಅನೇಕಬಾರಿ ಎಷ್ಟು ಜೋರಾಗಿ ಹಣೆಯನ್ನು ಬಡಿದುಕೊಂಡರೆಂದರೆ, ಅವರ ಹಣೆಯಿಂದ ರಕ್ತ ಬರಲಾರಂಭಿಸಿತಂತೆ. ಅವರು ಅತ್ಯಂತ ಘಾಸಿಗೊಂಡರು. ನೋಡಿ, ನೀವು ಏನನ್ನಾದರೂ ಕಠೋರವಾಗಿ ಹೇಳಿದರೆ, ಅಂತಹ ಕಷ್ಟವಾಗುವುದು. ಅದು ಸರಿ ಇರಬಹುದು, ಆದರೆ ನೀವು ಅದನ್ನು ಬೇರೆ ರೀತಿಯಾಗಿ ಹೇಳಬಹುದಿತ್ತು. ನೀವು ಮೃದುವಾಗಿ ಅಥವಾ ಮತ್ತೊಂದು ಸಮಯದಲ್ಲಿ ಹೇಳಬಹುದಿತ್ತು. ಹಾಗೆ ಮಾಡದಿದ್ದಾಗ ಪಶ್ಚಾತ್ತಾಪ ನಿಮ್ಮ ಹೃದಯವನ್ನು ಮತ್ತೆ ಮತ್ತೆ ಕಲಕುವುದು. ಸ್ವಾಮೀಜಿಯವರು ಬಾಹ್ಯ ಪೂಜೆಯ ಬಗ್ಗೆ ಕಠೋರವಾಗಿ ಮಾತನಾಡಿದುದಕ್ಕಾಗಿ ಮಾಡಿದ ತಪಸ್ಸು ಎಂದು ಈ ಘಟನೆಯನ್ನು ಕೆಲವರು ವಿವರಿಸಿದ್ದಾರೆ. ಅಲ್ಲ, ಅವರು ಪಶ್ಚಾತ್ತಾಪ ಮತ್ತು ದುಃಖದಿಂದ ಕ್ಲೇಶಕ್ಕೊಳಗಾದರು.

ಸ್ವಲ್ಪ ಕಾಲದ ನಂತರ, ಸ್ವಾಮಿ ಪ್ರೇಮಾನಂದರು ಕಟ್ಟಡವೊಂದರ ಛಾವಣಿಯ ಮೇಲೆ ಹತ್ತಿ ಹೋಗಿ ಇಳಿಮುಖರಾಗಿ ದುಗುಡದಿಂದ ಕುಳಿತಿರುವುದು ಕಂಡು ಬಂದಿತು. ಅವರನ್ನು ಕೆಳಗಡೆಗೆ ಕರೆದುಕೊಂಡು ಬರಲಾಯಿತು. ಸ್ವಾಭಾವಿಕವಾಗಿ, ಸ್ವಾಮಿ ವಿವೇಕಾನಂದರು ಅವರನ್ನು ಆಲಿಂಗಿಸಿ ಅವರ ಕ್ಷಮೆ ಯಾಚಿಸಿದರು. ಆದರೆ ಅವರು ಸ್ವಾಮಿ ಪ್ರೇಮಾನಂದರಿಗೆ ಹೇಳಿದ ಮಾತು ಸರಿಯಾದುದಾಗಿತ್ತು. ಅವರು ಆ ಬಗ್ಗೆ ತಮ್ಮ ಅಭಿಪ್ರಾಯವನ್ನು ಬದಲಾಯಿಸಲಿಲ್ಲ. ಶ್ರೀರಾಮಕೃಷ್ಣರು ಧರೆಗೆ ತಂದ ಅದ್ಭುತ ಆಧ್ಯಾತ್ಮಿಕ ಶಕ್ತಿ ತರಂಗವೆಲ್ಲವೂ ಹೇಗೊ ಒಂದು ಪೂಜೆಯ ಕೋಣೆಗೆ ಸೀಮಿತವಾಗಿ ಅದರಲ್ಲಿಯೇ ಕಳೆದುಹೋಗಿಬಿಡಬಹುದೆಂಬ ದಿಗಿಲು ಅವರಿಗೆ ಯಾವಾಗಲೂ ಇರುತ್ತಿತ್ತು. ಶ್ರೀರಾಮಕೃಷ್ಣರು ಮಾನವ ಕೋಟಿಯ ಕಲ್ಯಾಣಕ್ಕಾಗಿ ಅವತರಿಸಿದರು, ಬಾಹ್ಯಪೂಜೆ ಮತ್ತು ಸ್ವಲ್ಪ ಭಕ್ತಿಯ ಆಚರಣೆಗಳನ್ನು ಮಾಡುವ ಕೆಲವು ವ್ಯಕ್ತಿಗಳಿಗಾಗಿ ಮಾತ್ರವಲ್ಲ. ಅಂತಹವರ ಸಂಖ್ಯೆ ಕಡಿಮೆ. ಅತ್ಯಂತ ಹೆಚ್ಚು ಜನಕ್ಕೆ ಉಪಯೋಗವಾಗಲೆಂದು ಈ ಅದ್ಭುತ ಶಕ್ತಿಯನ್ನು ಸೇವೆಯ ರೂಪದಲ್ಲಿ ಜನರಿಗೆ ಹರಿಸಬೇಕು.

ಸ್ವಾಮೀಜಿಯವರು ಸ್ವಾಮಿ ಪ್ರೇಮಾನಂದರಿಗೆ ಅನೇಕ ವಿಷಯಗಳನ್ನು ಹೇಳಿಕೊಟ್ಟರು. ಸಂದರ್ಭ ಬಂದಾಗಲೆಲ್ಲ ಅವರಿಗೆ ಹೇಳಿಕೊಡುತ್ತಿದ್ದರು. ಅವರ ಐಹಿಕ ಜೀವನದ ಕೊನೆಯ ದಿನ (ಜುಲೈ ೪, ೧೯೦೨) ಸಂಜೆಗೆ ಮುನ್ನ ಅವರೊಂದಿಗೆ ತಿರುಗಾಡಲು ಹೊರಗೆ ಹೋದರು. ಅವರ ಆರೋಗ್ಯ ಅಂದು ಚೆನ್ನಾಗಿತ್ತೆಂದು ಅವರಿಗೆ ಅನ್ನಿಸುತ್ತಿತ್ತು. ಅವರು ಬಹಳ ಹೊತ್ತು ಮಾತನಾಡಿದರು. ಪಶ್ಚಿಮ ದೇಶಗಳಲ್ಲಿ ತೋಟಗಳನ್ನು ಹೇಗೆ ಕಾಪಾಡುವರು ಎಂಬ ಬಗ್ಗೆ, ಯೂರೋಪಿನ ಚರಿತ್ರೆಯ ಬಗ್ಗೆ, ವೇದಗಳ ಬಗ್ಗೆ ಮಾತನಾಡಿದರು. ಮಠದಲ್ಲಿ ವೇದಗಳ ಬಗ್ಗೆ ಒಂದು ಕಾಲೇಜನ್ನು ಆದಷ್ಟು ಬೇಗ ಸ್ಥಾಪಿಸುವಂತೆ ಸ್ವಾಮಿ ಪ್ರೇಮಾನಂದರಿಗೆ ಹೇಳಿದರು. ಹೀಗೆ ಕೊನೆಯ ದಿನ ಕೂಡ ಸ್ವಾಮಿ ಪ್ರೇಮಾನಂದರೊಡನೆ ಬಹಳಷ್ಟು ಮಾತನಾಡಿ, ಅವರಿಗೆ ತರಪೇತನ್ನು ಕೊಟ್ಟು ಭವಿಷ್ಯದಲ್ಲಿ ಅದರ ಉಪಯೋಗಕ್ಕಾಗಿ ಅವರಿಗೆ ಬೋಧಿಸಿದರು.

–೩–

ಸ್ವಾಮಿ ವಿವೇಕಾನಂದರು ಕಾಲವಾಗುವ ಮುನ್ನ ಸ್ವಾಮಿ ಪ್ರೇಮಾನಂದರಿಗೆ ಎರಡು ನಿರ್ದೇಶಗಳನ್ನು ನೀಡಿದ್ದರು. ಒಂದು, ಅವರು ಬೇಲೂರು ಮಠದ ನಿರ್ವಹಣೆಯನ್ನು ವಹಿಸಿಕೊಳ್ಳಬೇಕು. ಎರಡನೆಯದಾಗಿ, ಯಾರನ್ನೂ ಅವರ ಶಿಷ್ಯರನ್ನಾಗಿ ಮಾಡಿಕೊಳ್ಳಬಾರದು. ''ನೀನು ಶಿಷ್ಯರನ್ನು ಪಡೆದರೆ, ನಿನ್ನ ಶಿಷ್ಯರು ಬ್ರಹ್ಮಾನಂದರ ಶಿಷ್ಯರೊಡನೆ ಜಗಳವಾಡುವರು'' ಎಂದು ಹೇಳಿದರು. ಮತ್ತೊಂದು ಮೂಲದ ಪ್ರಕಾರ, ಸ್ವಾಮೀಜಿಯವರು ವಿವರಿಸಿದರಂತೆ: ''ಬಾಬು ರಾಮ ಶಿಷ್ಯರನ್ನು ಪಡೆದರೆ, ಎಲ್ಲರೂ ಅವನ ಶಿಷ್ಯರೇ ಆಗಲು ಬಯಸುವರು. ಉಳಿದವರ ಬಳಿ ಯಾರೂ ಬರುವುದಿಲ್ಲ.'' ಸ್ವಾಮೀಜಿಯವರು ಭಯಪಟ್ಟಂತೆ ಅದು ಬಹುಶಃ ಹಾಗೆಯೇ ಆಗುತ್ತಿತ್ತೆಂದು ತೋರುವುದು. ನಂತರದ ಜೀವನದಲ್ಲಿ ಸ್ವಾಮಿ ಪ್ರೇಮಾನಂದರ ಆಕರ್ಷಣೆ ಹೇಗಿತ್ತೆಂದರೆ, ಅವರೇನಾದರೂ ಮಂತ್ರೋಪದೇಶ ಕೊಟ್ಟಿದ್ದರೆ, ಅವರಿಗೆ ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಶಿಷ್ಯರಿರುತ್ತಿದ್ದರು. ಆದರೂ ನೂರಾರು ವ್ಯಕ್ತಿಗಳು ಮಂತ್ರೋಪದೇಶಕ್ಕಾಗಿ ಅವರನ್ನು ಬೇಡುತ್ತಿದ್ದರು. ಒಬ್ಬ ಯುವಕ ಅವರಿಗೆ ಹೇಳಿದ, 'ನೀವೇನಾದರೂ ಉಪದೇಶ ಕೊಡದಿದ್ದರೆ, ನಾನು ಉಪವಾಸ ಮಾಡಿ ಪ್ರಾಣಬಿಡುತ್ತೇನೆ.' ಆತ ಉಪವಾಸ ಪ್ರಾರಂಭಿಸಿದ. ಆತ ಶ್ರೀಮಾತೆಯವರಿಂದ ದೀಕ್ಷೆಯನ್ನು ಪಡೆಯುವಂತೆ ಅವನನ್ನು ಮನವೊಲಿಸಲು ಅನೇಕ ದಿನಗಳು ಬೇಕಾದುವು. ಇಂತಹ ಘಟನೆಗಳು ಅನೇಕ. ಜನರು ಉಪದೇಶಕ್ಕಾಗಿ ಎಷ್ಟೇ ಪೀಡಿಸಿದರೂ ಪ್ರೇಮಾನಂದರು ಅವರ ಬೇಡಿಕೆಯನ್ನು ತಿರಸ್ಕರಿಸುತ್ತಿದ್ದರು. *

*(ಮುಂದುವರಿಯುವುದು)*

ಸ್ವಾಮಿ ನಿತ್ಯಸ್ಥಾನಂದ

# ಭಕ್ತನ ಲಕ್ಷಣ

### ಭಾಗ ೨

**ನಿರಹಂಕಾರ:** ಅಹಂಕಾರವನ್ನು ಕುರಿತು ಶ್ರೀಶಂಕರಾಚಾರ್ಯರು ಹೀಗೆ ಹೇಳುತ್ತಾರೆ :

ಬ್ರಹ್ಮಾನಂದನಿಧಿರ್ಮಹಾಬಲವತಾಽಹಂಕಾರಘೋರಾಹಿನಾ
ಸಂವೇಷ್ಟ್ಯಾತ್ಮನಿ ರಕ್ಷ್ಯತೇ ಗುಣಮಯೇಶ್ಚಂಡೈಸ್ತ್ರಿಭಿರ್ಮಸ್ತಕೈಃ ।
ವಿಜ್ಞಾನಾಖ್ಯಮಹಾಸಿನಾ ದ್ಯುತಿಮತಾ ವಿಚ್ಛಿದ್ಯ ಶೀರ್ಷತ್ರಯಂ
ನಿರ್ಮೂಲ್ಯಾಹಿಮಿಮಂ ನಿಧಿಂ ಸುಖಕರಂ ಧೀರೋಽನುಭೋಕ್ತುಂ ಕ್ಷಮಃ॥ *(ವಿವೇಕಚೂಡಾಮಣಿ, ೩೦೧)*

'ಬಲಿಷ್ಠವಾದ ಅಹಂಕಾರವೆಂಬ ಘೋರಸರ್ಪವು ಬ್ರಹ್ಮಾನಂದವೆಂಬ ನಿಧಿಯನ್ನು ಸತ್ತ್ವರಜಸ್ತಮೋಗುಣಗಳೆಂಬ ರೋಷಯುಕ್ತ ಮೂರು ಹೆಡೆಗಳಿಂದ ಸುತ್ತಿಕೊಂಡು ತನ್ನಲ್ಲಿ ರಕ್ಷಿಸಿಕೊಂಡಿರುತ್ತದೆ. ಬ್ರಹ್ಮಜ್ಞಾನವೆಂಬ ಥಳಥಳಿಸುವ ದೊಡ್ಡ ಕತ್ತಿಯಿಂದ ಮೂರು ಹೆಡೆಗಳನ್ನೂ ಕತ್ತರಿಸಿ, ಈ ಸರ್ಪವನ್ನು ನಾಶಮಾಡಿ, ಆನಂದಕರವಾದ ಈ ನಿಧಿಯನ್ನು ಅನುಭವಿಸಲು ಧೀಮಂತನಾದವನೇ ಶಕ್ತನಾಗಿರುತ್ತಾನೆ.'

ಇನ್ನೊಂದು ಶ್ಲೋಕದಲ್ಲಿ ಆಚಾರ್ಯರು ಹೇಳುತ್ತಾರೆ: ಸೂರ್ಯನಿಂದಲೇ ಉಂಟಾಗಿರುವ ಮೋಡವು ಸೂರ್ಯನನ್ನೇ ಮರೆಮಾಚುವಂತೆ ಆತ್ಮನಿಂದಲೇ ಉದಿಸಿರುವ ಅಹಂಕಾರವು ಆತ್ಮನನ್ನೇ ಮರೆಸಿ ತಾನೇ ಮೆರೆಯುತ್ತದೆ. ಆತ್ಮನು ವಿಷಯಗಳೊಡನೆ ತಾದಾತ್ಮ್ಯ ಹೊಂದುವುದರಿಂದ ಅಹಂಕಾರವುಂಟಾಗುತ್ತದೆ. ಮನೋವಿಕಾರಗಳೊಡನೆಯ ತಾದಾತ್ಮ್ಯದಿಂದ 'ನಾನು ಸುಖಿ', 'ನಾನು ದುಃಖಿ' ಎಂಬ ಅಹಂಕಾರವುಂಟಾಗುತ್ತದೆ. ಹೀಗೆಯೇ ದೇಹೇಂದ್ರಿಯ ವಿಷಯಗಳೊಡನೆಯೂ ತಾದಾತ್ಮ್ಯವುಂಟಾಗು ತ್ತದೆ. ಅಹಂಕಾರಕ್ಕೆ ನಿಜವಾದ ಅಸ್ತಿತ್ವವಿಲ್ಲ, ಅದು ಇನ್ನೊಂದು ವಸ್ತುವಿನ ಆಧಾರದ ಮೇಲೆಯೇ ಬೆಳೆಯುತ್ತದೆ. ಅದಕ್ಕೆ ತನ್ನ ಅಸ್ತಿತ್ವವನ್ನು ದೃಢೀಕರಿಸಲು ಏನಾದರೊಂದು ಆಶ್ರಯ ಬೇಕು – ಆಸ್ತಿ, ಅಧಿಕಾರ, ಮನೆ, ಕೀರ್ತಿ, ವಿದ್ವತ್ತು ಮುಂತಾದವು. ಅನೇಕರಲ್ಲಿ ಕಷ್ಟನಷ್ಟಗಳೂ ಅಹಂಕಾರಕ್ಕೆ ಆಶ್ರಯಗಳಾಗುತ್ತವೆ. 'ನನಗೆ ಆ ಕಷ್ಟ, ಈ ಕಷ್ಟ, ನನ್ನ ತೊಂದರೆಗಳಿಗೆ ಕೊನೆಯೇ ಇಲ್ಲ', ಎಂದು ಯಾವಾಗಲೂ ಅಂದುಕೊಳ್ಳುತ್ತಿರುತ್ತಾರೆ, ಅಥವಾ ಕೇಳುವವರಿದ್ದರೆ ಹೇಳಿಕೊಳ್ಳುತ್ತಿರುತ್ತಾರೆ. ವಿಶೇಷವೇನೆಂದರೆ ಅಹಂಕಾರದ ದೆಸೆಯಿಂದ ಸಣ್ಣ ಕಷ್ಟವೂ ಬೃಹದಾಕಾರವನ್ನು ಪಡೆಯುತ್ತದೆ. ಕೆಲವರು ತಮ್ಮ ದೌರ್ಬಲ್ಯವನ್ನೇ ಅಹಂಕಾರದ ಆಶ್ರಯವನ್ನಾಗಿ ಮಾಡಿಕೊಳ್ಳುತ್ತಾರೆ. 'ನನಗೆ ಅದಾಗುವುದಿಲ್ಲ, ನನಗೆ ಶಕ್ತಿಯಿಲ್ಲ, ನನಗೆ ಏಕಾಗ್ರತೆ ಇಲ್ಲ, ಪಾವಿತ್ರ್ಯವಿಲ್ಲ, ನನ್ನ ಕರ್ಮ, ಅನುಭವಿಸಬೇಕಾಗಿದೆ, ಎಂಬಿತ್ಯಾದಿಯಾಗಿ ಚಿಂತಿಸುತ್ತಿರುತ್ತಾರೆ. ಅನೇಕ ರೂಪಗಳಲ್ಲಿ ಈ 'ನಾನು' ಕುಣಿದಾಡುತ್ತಿರುತ್ತದೆ. ಹೇಗಾದರೂ ಅಹಂಕಾರವನ್ನು ಪೋಷಿಸಬೇಕು! ಸಂಪತ್ತಿರುವಾಗ ಸಂಪತ್ತಿನ ಅಹಂಕಾರ, ಅದನ್ನು ಬಿಟ್ಟಮೇಲೆ 'ಬಿಟ್ಟ' ಅಹಂಕಾರ! ಒಂದು ಬಗೆಯ ತಾದಾತ್ಮ್ಯದಿಂದ ಕಳಚಿಕೊಂಡರೆ ಅಹಂಕಾರವು ಕೂಡಲೆ ಇನ್ನೊಂದರೊಡನೆ ತಾದಾತ್ಮ್ಯವನ್ನು ಪಡೆಯುತ್ತದೆ. ಅಹಂಕಾರದ ವಿವಿಧ ಮುಖಗಳನ್ನು ಪರಿಣಾಮಕಾರಿಯಾಗಿ ವಿವರಿಸುತ್ತ ಏಖಾರ್ಟ್ ಟೋಲೆಯವರು ಹೇಳುತ್ತಾರೆ: 'ಅಹಂಕಾರವು ಹೊಂದಿರುವಿಕೆಯನ್ನೇ ಇರುವಿಕೆ ಯೆಂದು ಪರಿಗಣಿಸುತ್ತದೆ – ನನಗಿದೆ, ಆದ್ದರಿಂದ ಇದ್ದೇನೆ. *(ನೋಡಿ, 'A New Earth', ಪು. ೨೫–೮೪).*

ಸ್ವಾಮಿ ಯತೀಶ್ವರಾನಂದರಿಗೆ ಭಕ್ತರೊಬ್ಬರು ಪತ್ರ ಬರೆಯುತ್ತಾರೆ. ಅದನ್ನು ಅವರ ಸೇವಕರೊಬ್ಬರು ಅವರಿಗೆ ಓದಿಹೇಳುತ್ತಾರೆ. ಅದರಲ್ಲಿ 'ನಾನು ಧ್ಯಾನ ಮಾಡಲಾರೆ, ನಾನು ಎಷ್ಟು ಪ್ರಯತ್ನಿಸುತ್ತೇನೆ, ನನಗಾಗದು' ಇತ್ಯಾದಿ ಹೇಳಿಕೆಗಳೇ ತುಂಬಿಕೊಂಡಿದ್ದವು. ಸ್ವಾಮೀಜಿಯವರು ಆ ಪತ್ರದಲ್ಲಿ ಎಷ್ಟು 'ನಾನು' ಗಳಿವೆ ಎಂದು ಎಣಿಸಲು ಸೇವಕರಿಗೆ ಹೇಳಿದರು. ಆ ಸಣ್ಣ ಪತ್ರದಲ್ಲಿ ೪೮ 'ನಾನು' ಗಳಿದ್ದವು. ಸ್ವಾಮೀಜಿಯವರು ಮುಗುಳ್ನಕ್ಕು ಸೇವಕರಿಗೆ ಈ ರೀತಿ ಬರೆಯಲು ಹೇಳಿದರು : 'ಇಷ್ಟೊಂದು 'ನಾನು' ಇರುವಾಗ ನೀನು ಹೇಗೆ ಧ್ಯಾನ ಮಾಡಬಲ್ಲೆ?'

ಈ 'ನಾನು' ಎಂಬುದು ಯಾವುದಕ್ಕೂ ಅಂಟಿಕೊಳ್ಳದೆ, ತಾನೇ ತಾನಾಗಿದ್ದು, ಶುದ್ಧ ಅಹಂಪ್ರಜ್ಞೆಯಾಗಿ ಉಳಿದರೆ ಅದು ಅಹಂಕಾರವೆನಿಸುವುದಿಲ್ಲ. ಈ ಸಂಬಂಧವಾಗಿ ಏಖಾರ್ಟ್ ಟೋಲೆಯವರು ಹೀಗೆ ಹೇಳುತ್ತಾರೆ : ''ಅಹಂಕಾರದಿಂದ ಮುಕ್ತರಾಗಲು ನಾವೇನು ಮಾಡಬೇಕೆಂದರೆ ಅದರ ಅರಿವು ನಮಗುಂಟಾಗಬೇಕು. ಏಕೆಂದರೆ ಅರಿವು ಮತ್ತು ಅಹಂಕಾರಗಳ ಸಹಭಾಗಿತ್ವ ಅಸಾಧ್ಯ.'' ಇನ್ನೊಂದು ಉಪಾಯವೆಂದರೆ ಅಹಂಕೇಂದ್ರಿತ ಜೀವನವನ್ನು ಬಿಟ್ಟು ಭಗವತ್ ಕೇಂದ್ರಿತ ಜೀವನವನ್ನು ನಡೆಸುವುದು – 'ನಾನು ನಾನು' ಎನ್ನುವುದನ್ನು ಬಿಟ್ಟು 'ನೀನು ನೀನು' ಎನ್ನುವುದು. ಆದ್ದರಿಂದ ಭಕ್ತನು ನಿರಹಂಕಾರಿಯಾಗಿರುತ್ತಾನೆ.

**ಸಮದುಃಖಸುಖಃ :** ಭಕ್ತನು ಸುಖದುಃಖಗಳೆರಡರಲ್ಲೂ ಸಮಾನವಾಗಿರುತ್ತಾನೆ, ಸುಖದಲ್ಲಿ ಹಿಗ್ಗುವುದೂ ಇಲ್ಲ, ದುಃಖದಲ್ಲಿ ಕುಗ್ಗು

ವುದೂ ಇಲ್ಲ. ಅವನು ಸುಖದುಃಖಗಳೆರಡನ್ನೂ ಸಮಾನವಾಗಿ ಕಾಣುತ್ತಾನೆ. ಸಾಮಾನ್ಯವಾಗಿ ಸುಖದ ಸಮಯದಲ್ಲಿ ಅತ್ಯಂತ ಹಿಗ್ಗುವವರು ದುಃಖದ ಸಮಯದಲ್ಲಿ ಅಷ್ಟೇ ಕುಗ್ಗುತ್ತಾರೆ. ಕೆಲವರು ಯಾವಾಗಲೂ ಸುಖವಾಗಿಯೇ ಇರಬೇಕೆಂದು ಅತ್ಯಂತವಾಗಿ ಬಯಸುತ್ತಾರೆ. ಅದರಿಂದಾಗಿ ದುಃಖದ ಬಗ್ಗೆ ಬಹಳ ಭಯ ಆತಂಕ ಗಳಿರುತ್ತವೆ. ಹೀಗಾಗಿ ಅವರು ಸುಖವನ್ನೂ ಸರಿಯಾಗಿ ಅನುಭವಿಸಲಾರರು. ದುಃಖದ ಭಯದಿಂದ ಸುಖದ ಕ್ಷಯವಾಗುತ್ತದೆ.

'ಭಕ್ತಿಸೌರಭ' ಎಂಬ ಪುಸ್ತಕದಲ್ಲಿ ಈ ಸುಖದುಃಖಗಳ ವ್ಯಾಖ್ಯಾನ ತುಂಬ ಸ್ವಾರಸ್ಯಕರವಾಗಿದೆ: ಸುಖದುಃಖಗಳೆರಡಕ್ಕೂ ಬ್ರಹ್ಮವು ಅಧಿಷ್ಠಾನವಾಗಿದೆ. 'ಸುಖಂ', 'ದುಃಖಂ' ಈ ಎರಡು ಪದಗಳಿಗೂ ಸಾಮಾನ್ಯವಾದ ಅಕ್ಷರವು 'ಖಂ' ಆಗಿದೆ. ಆದರೆ ಒಂದು ಪದದಲ್ಲಿ 'ಸು' ಬಂದಿದ್ದರೆ ಮತ್ತೊಂದರಲ್ಲಿ 'ದು' ಬಂದಿದೆ. ಒಂದು ಅನುಕೂಲವೃತ್ತಿ, ಇನ್ನೊಂದು ಪ್ರತಿಕೂಲವೃತ್ತಿ. ಈ ಎರಡು ವೃತ್ತಿಗಳಿಗೂ ಅಧಿಷ್ಠಾನವಾಗಿರುವ 'ಖಂ' ಒಂದೇ. 'ಖಂ' ಎಂದರೆ ಬ್ರಹ್ಮ. ಈ ಎರಡೂ ವೃತ್ತಿಗಳನ್ನೂ ಪ್ರಕಾಶಗೊಳಿಸುವ ಸಾಕ್ಷಿ ಒಂದೇ. 'ಕಂಬ್ರಹ್ಮ ಖಂಬ್ರಹ್ಮ' ಎಂಬುದು ವೇದವಾಣಿ. ಅಧಿಷ್ಠಾನ ಬ್ರಹ್ಮವನ್ನು ದರ್ಶಿಸಿದ ಭಕ್ತನು ಕಲ್ಪಿತ ವೃತ್ತಿಗಳೊಂದಿಗೆ ತಾದಾತ್ಮ್ಯ ಹೊಂದಿ ತಬ್ಬಿಬ್ಬಾಗುವುದಿಲ್ಲ.

ಕೆಲವರು ಭವಿಷ್ಯದಲ್ಲಿ ಸುಖವಾಗಿರಬೇಕೆಂದು ಬಯಸುತ್ತ ಅದಕ್ಕಾಗಿ ಎಲ್ಲ ಸಿದ್ಧತೆಗಳನ್ನು ಮಾಡುತ್ತಾ ಹೋಗುತ್ತಾರೆ, ಸಿದ್ಧತೆಯಲ್ಲಿಯೇ ಇಡೀ ಜೀವನ ಕಳೆದುಹೋಗುತ್ತದೆ. ನಾವು ಸುಖವನ್ನು ಅರಸುತ್ತ ಹೋದಷ್ಟೂ ಸುಖ ಹಿಮ್ಮೆಟ್ಟುತ್ತ ಹೋಗುತ್ತದೆ, ಎಂದು ವಿಕ್ಟರ್ ಈ ಫ್ರಾಂಕ್ಲ್ ಎಂಬ ಮನಶ್ಶಾಸ್ತ್ರಜ್ಞರು ಹೇಳುತ್ತಾರೆ. ಸುಖವು ಜೀವನದ ಗುರಿಯಾಗಲಾರದು, ಆತ್ಮಾಭಿವ್ಯಕ್ತಿ (self-expression) ಗುರಿಯಾಗಬೇಕು, ಆತ್ಮಾಭಿವ್ಯಕ್ತಿಯ ಉಪ ಉತ್ಪನ್ನವಾಗಿ (by-product) ಸುಖವುಂಟಾಗುತ್ತದೆ. ದುಃಖವು ಆತ್ಮಾಭಿವ್ಯಕ್ತಿ ಹೋರಾಟದ ಅವಿಭಾಜ್ಯ ಅಂಗ, ಅದಕ್ಕೂ ಜೀವನದಲ್ಲಿ ಅರ್ಥಪೂರ್ಣವಾದ ಸ್ಥಾನವಿದೆ. ಆಗ ದುಃಖವು ಬಾಧಕವಾಗದೆ ಸಾಧಕವಾಗುತ್ತದೆ.

ಆಗ ದುಃಖವನ್ನು ಸಹಿಸುವ ಅಪಾರ ಸಾಮರ್ಥ್ಯ ಮನುಷ್ಯನಿಗೆ ಬರುತ್ತದೆ. ಸ್ವಾಮಿ ವಿವೇಕಾನಂದರ ವಾಣಿ ಈ ಸಂದರ್ಭದಲ್ಲಿ ಮನ ಸ್ಸಿಗೆ ಬರುತ್ತದೆ : ''ಕರ್ತೃತ್ವ ಶಕ್ತಿಗಿಂತ ದುಃಖಸಹಿಷ್ಣುತಾ ಶಕ್ತಿ ಅನಂತ ಪಾಲು ಹಿರಿದು; ದ್ವೇಷಶಕ್ತಿಗಿಂತ ಪ್ರೀತಿಯ ಬಲ ಕೋಟಿ ಪಾಲು ಮೇಲು.'' *(ಕೃತಿಶ್ರೇಣಿ, ೫.೨೯೮)*

'ಭಕ್ತಿಸೌರಭ'ದಲ್ಲಿ ಈ ಕೆಳಗಿನ ಸ್ವಾರಸ್ಯಕರ ಕಥೆಯಿದೆ :

ಒಮ್ಮೆ ಶಿವಪಾರ್ವತಿಯರು ಲೋಕಸಂಚಾರಕ್ಕೆ ಹೊರಟಿದ್ದರು. ದಾರಿಯಲ್ಲಿ ಒಂದುಕಡೆ ಸನಕ, ಸನಂದನ, ಸನತ್ಕುಮಾರ ಮತ್ತು ಸನತ್ಸುಜಾತರು ಊರ್ಧ್ವಮುಖಿಗಳಾಗಿ ಕುಳಿತಿದ್ದರು, ಅವರು ಶಿವಪಾರ್ವತಿಯರ ಕಡೆ ಗಮನವನ್ನೇ ಹರಿಸಲಿಲ್ಲ. ಪಾರ್ವತಿಗೆ ಇದನ್ನು ಸಹಿಸಲಾಗಲಿಲ್ಲ. ''ಅಬ್ಬಾ! ನೀವೆಂಥಾ ಜನ! ಸಭ್ಯತೆಯಿಲ್ಲ, ಶಿಷ್ಟಾಚಾರವಿಲ್ಲ. ಒಂಟೆಗಳಂತೆ ಕತ್ತು ಚಾಚಿಕೊಂಡು ಕುಳಿತಿದ್ದೀರಿ. ನೀವೆಲ್ಲ ಒಂಟೆಗಳಾಗಿ ಹೋಗಿ'' ಎಂದು ಶಪಿಸಿದಳು. ಕೆಲವು ದಿನಗಳ ನಂತರ ಕೋಪದಿಂದ ತಾನು ಶಪಿಸಿದುದು ತಪ್ಪಾಯಿತೆಂದು ಆಕೆಗೆ ಬೇಸರವಾಯಿತು. ಶಿವಪಾರ್ವತಿಯರು ಋಷಿಗಳಿರುವ ಸ್ಥಳಕ್ಕೆ ಬರುತ್ತಾರೆ. ಒಂಟೆಗಳಾಗಿ ಓಡಾಡುತ್ತಿದ್ದ ಅವರನ್ನು ನೋಡಿ ತಾಯಿಯ ಹೃದಯ ಮರುಗಿತು. ''ಅಯ್ಯಾ ಮಕ್ಕಳೇ! ನಿಮ್ಮ ಪರಿಸ್ಥಿತಿ ಹೇಗಿದೆ?'' ಎಂದು ಮರುಕದಿಂದ ಕೇಳಿದಳು. ಒಂಟೆಯ ರೂಪದಲ್ಲಿದ್ದ ಅವರು ಹೇಳಿದರು: ''ತಾಯಿ! ಈ ದೇಹಗಳು ಆತ್ಮಕ್ಕೆ ಬಟ್ಟೆಗಳಿದ್ದಂತೆ. ಬಟ್ಟೆ ಹತ್ತಿಯದಾದರೇನು, ರೇಷ್ಮೆಯದಾದರೇನು? ಅದು ಕೇವಲ ವಸ್ತ್ರತಾನೆ? ಮನುಷ್ಯದೇಹದಲ್ಲಿದ್ದಾಗ ನಮಗೆ ಕೆಲವು ಕಷ್ಟಗಳಿದ್ದವು. ತಾಯಿಯ ಕೃಪೆಯಿಂದಾಗಿ ಈಗ ನಾವು ಆ ತೊಂದರೆಗಳಿಂದ ಮುಕ್ತರಾಗಿದ್ದೇವೆ. ಆಗ ನಾವು ಭಿಕ್ಷೆಗೆ ಹೋಗ ಬೇಕಿತ್ತು. ಮಲಮೂತ್ರ ವಿಸರ್ಜನೆಯ ನಂತರ ದೇಹ ಶುದ್ಧಿಯಾಗಬೇಕಿತ್ತು. ಸ್ನಾನ ಶೌಚಗಳನ್ನು ಮಾಡಬೇಕಿತ್ತು. ಜಿಜ್ಞಾಸುಗಳು ನಮ್ಮಲ್ಲಿಗೆ ಬಂದಾಗ ಅವರ ಆಧ್ಯಾತ್ಮಿಕ ಸಮಸ್ಯೆಗಳನ್ನು ಪರಿಹರಿಸಬೇಕಿತ್ತು. ಈಗ ನಮಗೆ ಇವಾವ ಕಷ್ಟಗಳೂ ಇಲ್ಲ. ತಿನ್ನಲಿಕ್ಕೆ ನಾವಿರುವಲ್ಲೇ ಸಮೃದ್ಧಿಯಾಗಿ ಗಿಡಮರಗಳಿವೆ. ಸ್ನಾನ ಶೌಚ ಇತ್ಯಾದಿಗಳ ಗೊಡವೆಯೇ ಇಲ್ಲ. ಹೇಳುವವರಿಲ್ಲ, ಕೇಳುವವರಿಲ್ಲ, ಆರಾಮವಾಗಿ ನಮ್ಮ ಪಾಡಿಗೆ ನಾವಿದ್ದೇವೆ. ತಾಯಿಯ ಶಾಪ ನಮಗೆ ಅನುಗ್ರಹವೇ ಆಯಿತು.''

**ಕ್ಷಮೀ :** ಭಕ್ತನು ಕ್ಷಮಾಶೀಲನಾಗಿರುತ್ತಾನೆ. **ಕ್ಷಮ** ಎಂಬ ಶಬ್ದಕ್ಕೆ ಮೂರು ಅರ್ಥಗಳಿವೆ – ಸಾಮರ್ಥ್ಯ, ಸಹನಶೀಲತೆ ಮತ್ತು ಮನ್ನಿಸುವಿಕೆ. ಅನೇಕ ರೀತಿಯ ಸಾಮರ್ಥ್ಯಗಳಿವೆ. ಕೆಲವರು ಕೆಲಸದಲ್ಲಿ ಸಮರ್ಥರು – ಅವರಲ್ಲಿ ಅಪಾರ ಕಾರ್ಯಕ್ಷಮತೆ ಇರುತ್ತದೆ. ಅವರು ಯಾವುದೇ ಕೆಲಸವನ್ನು ಎಷ್ಟು ಹೊತ್ತಾದರೂ ಅವಿಶ್ರಾಂತವಾಗಿ ಮಾಡಬಲ್ಲರು. ಇನ್ನು ಕೆಲವರಲ್ಲಿ ಅಧ್ಯಯನಕ್ಷಮತೆ ಇರುತ್ತದೆ. ಇನ್ನು ಕೆಲವರಲ್ಲಿ ಕಲಾತ್ಮಕ ಸಾಮರ್ಥ್ಯವಿರುತ್ತದೆ. ಮತ್ತೆ ಕೆಲವರಲ್ಲಿ ಆಟದಲ್ಲಿ ಕ್ಷಮತೆ ಇರುತ್ತದೆ, ಆದರೆ ಭಕ್ತನಲ್ಲಿ ಇರುವ ಕ್ಷಮತೆ ವಿಶೇಷವಾದುದು, ಅದು ಭಗವತ್ ಶಕ್ತಿಯ ಆವಿರ್ಭಾವ. 'ನಾನು ಈ ಪ್ರಪಂಚದಿಂದಲೂ ಯಾರಿಂದಲೂ ಏನನ್ನೂ ಬಯಸುವುದಿಲ್ಲ–' ಎಂಬ ವೈರಾಗ್ಯ ಮನೋಭಾವದಿಂದ ಉಂಟಾಗುವ ಆಂತರಿಕ ಸಾಮರ್ಥ್ಯ ಅಥವಾ ಬಲ ಬೇರೆ ಎಲ್ಲ ಸಾಮರ್ಥ್ಯಕ್ಕಿಂತಲೂ ಶ್ರೇಷ್ಠವಾದುದು. ಶ್ರೀಶಂಕರಾಚಾರ್ಯರು ಹೇಳುವಂತೆ ಇದು 'ಆತ್ಮನಿಷ್ಠಾಜನಿತ ಬಲ.'

ಈ ಬಲದಿಂದ ಕ್ಷಮಾಗುಣದ ಇನ್ನೊಂದು ಅರ್ಥವಾದ ಸಹನಶೀಲತೆ ಬರುತ್ತದೆ. ಈ ಪ್ರಪಂಚದಲ್ಲಿ ಅನೇಕರು ತೊಂದರೆ ಕೊಡುತ್ತಾರೆ, ನಮ್ಮನ್ನು ನೋಯಿಸುತ್ತಾರೆ, ಹಾಗೂ ಎಷ್ಟೋ ಅನ್ಯಾಯ

ಗಳಾಗುತ್ತವೆ. ಇವುಗಳನ್ನೆಲ್ಲ ಗೊಣಗದೆ, ಪರಿತಪಿಸದೆ, ಶಪಿಸದೆ, ಚಿಂತಾವಿಲಾಪಗಳಿಲ್ಲದೆ ಸಹಿಸುವ ಶಕ್ತಿ ನಮಗಿಲ್ಲದಿದ್ದರೆ ಆಧ್ಯಾತ್ಮಿಕ ಪ್ರಗತಿ ಕುಂಠಿತವಾಗುತ್ತದೆ. ನಾವೂ ಇತರರನ್ನು ನೋಯಿಸುತ್ತೇವೆ, ಇತರರಿಗೆ ತೊಂದರೆ ಕೊಡುತ್ತೇವೆ – ಉದ್ದೇಶಪೂರ್ವಕವಾಗಿ ಅಲ್ಲದಿರಬಹುದು. ನಮ್ಮ ದುರಹಂಕಾರವನ್ನು ಬಿಟ್ಟು ಇದನ್ನು ಅರ್ಥ ಮಾಡಿಕೊಳ್ಳುವುದು ನಮಗೆ ಸಾಧ್ಯವಾದರೆ ಇತರರ ತೊಂದರೆಗಳನ್ನು ಸಹಿಸುವುದು ಸಾಧ್ಯವಾಗುತ್ತದೆ. 'ತಾಳಿದವನು ಬಾಳಿಯಾನು' ಎಂಬ ಗಾದೆಮಾತಿದೆ. ತಾಳಿದವನು ಬಾಳುವುದು ಮಾತ್ರವಲ್ಲ, ಬೆಳೆಯುತ್ತಾನೆ ಕೂಡ – ನೈತಿಕವಾಗಿಯೂ ಆಧ್ಯಾತ್ಮಿಕವಾಗಿಯೂ. ಮುಂದಿನ ಆಂಗ್ಲವಾಣಿಯನ್ನು ನೆನೆಸಿಕೊಳ್ಳಿ:

''ಇತರರು ನಿಮ್ಮನ್ನು ನೋಯಿಸಿದಾಗ ಅವರು ಮರಳು ಕಾಗದವೆಂದು ಭಾವಿಸಿ. ಅವರು ನಿಮ್ಮನ್ನು ಉಜ್ಜಿ ಕೆರೆದು ನೋಯಿಸಬಹುದು. ಆದರೆ ಕೊನೆಯಲ್ಲಿ ನೀವು ನಯವಾಗುತ್ತೀರಿ, ಸುಸಂಸ್ಕೃತರಾಗುತ್ತೀರಿ, ಅವರು ಮಾತ್ರ ಸವೆದುಹೋಗುತ್ತಾರೆ.''

ಇತರರ ತಪ್ಪನ್ನು ನಮಗೇಕೆ ಸಹಿಸಲಾಗುವುದಿಲ್ಲ? ಇದಕ್ಕೆ ಮುಖ್ಯವಾಗಿ ಎರಡು ಕಾರಣಗಳಿವೆ : ೧. ಆ ತಪ್ಪು ನಮ್ಮಲ್ಲೂ ಇದ್ದು, ಅದರ ಬಗ್ಗೆ ಅಸಮಾಧಾನವಿರುವುದರಿಂದ, ಮತ್ತು ೨. ಇತರರ ಬಗ್ಗೆ ಸಹಾನುಭೂತಿಯ ಕೊರತೆಯಿಂದ. ಕೆಲವು ಸಂದರ್ಭ ಗಳಲ್ಲಿ ದೈಹಿಕ ದೌರ್ಬಲ್ಯ ಅಥವಾ ನರದೌರ್ಬಲ್ಯವೂ ಇದಕ್ಕೆ ಕಾರಣವಿರಬಹುದು. ಇನ್ನು ಕೆಲವು ಸಂದರ್ಭಗಳಲ್ಲಿ, ಎಲ್ಲರಿಗೂ ತಿಳಿದಿರುವಂತೆ, ಇತರರ ತಪ್ಪನ್ನು ನೋಡಿ ಕೋಪದಿಂದ ಬಯ್ಯು ವುದು ಇತರರ ಮೇಲಿನ ಶುದ್ಧ ಪ್ರೀತಿಯಿಂದ.

ಸಹನಶೀಲತೆಯಿದ್ದರೆ ಇತರರ ತಪ್ಪನ್ನು ಹೃತ್ಪೂರ್ವಕವಾಗಿ ಮನ್ನಿಸುವ ಸಾಮರ್ಥ್ಯ ಸ್ವಾಭಾವಿಕವಾಗಿ ಬರುತ್ತದೆ. ಇತರರು ನಮ್ಮ ತಪ್ಪನ್ನು ಕ್ಷಮಿಸಬೇಕೆಂದು ನಾವು ಬಯಸುತ್ತೇವೆ. ಹಾಗೆಯೇ ನಾವೂ ಇತರರನ್ನು ಕ್ಷಮಿಸುವ ಮನೋಭಾವವನ್ನು ಹೊಂದಿರಬೇಕು. ಇಲ್ಲಿ ಇತರರ ತಪ್ಪನ್ನು ಕ್ಷಮಿಸುವುದೆಂದರೇನು? ಇತರರ ತಪ್ಪಿಗೆ ನಾವು ಭೌತಿಕವಾಗಿ ಶಿಕ್ಷೆ ನೀಡದಿರಬಹುದು, ಎಷ್ಟೋ ಸಂದರ್ಭಗಳಲ್ಲಿ ಅದು ಆಗದೆಯೂ ಇರಬಹುದು. ಇತರರ ತಪ್ಪನ್ನು ಗಮನಿಸಿದಾಗ ನಮ್ಮಲ್ಲಿ ಆಂತರಿಕ ನಿಷೇಧಾತ್ಮಕ ಪ್ರತಿಕ್ರಿಯೆಯೂ ಉಂಟಾಗದಿದ್ದರೆ ಆಗ ಕ್ಷಮಿಸಿದಂತಾಗುತ್ತದೆ. ಇತರರು ನಮ್ಮನ್ನು ನೋಯಿಸಿದಾಗ, ಅವರ ತಪ್ಪು ಅಥವಾ ದೋಷವನ್ನು ಗಮನಿಸಿದಾಗ ನಮ್ಮಲ್ಲಿ ತೀವ್ರ ಅಸಮಾಧಾನ ಅಥವಾ ಮನಸ್ತಾಪ ಉಂಟಾಗುತ್ತದೆ. ಆಗ ಮನಸ್ಸಿನಲ್ಲಿಯೇ ಕಟುವಾಗಿ ಅವರನ್ನು ನಿಂದಿಸುತ್ತೇವೆ ಅಥವಾ ಖಂಡಿಸುತ್ತೇವೆ. ಕೋಪತಪ್ತ ಆಲೋಚನೆಗಳಿಂದ ಮನಸ್ಸು ಕುಣಿದಾಡುತ್ತಿರುತ್ತದೆ. ಅದರಿಂದ ನರಬಿಗಿತವುಂಟಾಗುತ್ತದೆ, ಮಾಂಸಖಂಡಗಳಲ್ಲಿಯೂ, ವಿಶೇಷವಾಗಿ ಮುಖದಲ್ಲಿ, ಬಿಗಿತವುಂಟಾಗುತ್ತದೆ. ಹೀಗೆ ಅನೇಕ ದೈಹಿಕ ಪ್ರತಿಕ್ರಿಯೆಗಳೂ ಉಂಟಾಗುತ್ತವೆ. ಈ ಮನಸ್ಸಿನ ಕುಣಿದಾಟವನ್ನು ಪ್ರಜ್ಞಾಪೂರ್ವಕವಾಗಿಯೂ ವಾಸ್ತವಿಕವಾಗಿಯೂ ನೋಡಲು ಸಾಧ್ಯವಾದರೆ ಮನಸ್ಸಿನ ಕುಣಿದಾಟವು ಕಡಿಮೆಯಾಗಿ, ಈ ದೈಹಿಕ ಪ್ರತಿಕ್ರಿಯೆಗಳೂ ತಣ್ಣಗಾಗುವುದನ್ನು ನಾವು ಸ್ಪಷ್ಟವಾಗಿ ಗಮನಿಸಬಹುದು – ವಿಶೇಷವಾಗಿ ಮುಖದಲ್ಲಿ. ಕೆಲವೊಮ್ಮೆ ಮುಗುಳ್ನಗೆ ಉಂಟಾಗಬಹುದು, ನನ್ನ ಮೂರ್ಖತನಕ್ಕೆ ನಾನೇ ನಗಬಹುದು.

ಮನಶ್ಶಾಸ್ತ್ರದಲ್ಲಿ ಕ್ಷಮಾಗುಣವನ್ನು ಈ ರೀತಿ ನಿರ್ವಚಿಸಲಾಗಿದೆ: ''ಅನ್ಯಾಯವಾಗಿ ನಮ್ಮನ್ನು ನೋಯಿಸುವ ವ್ಯಕ್ತಿಯ ಬಗ್ಗೆ ಮನಸ್ತಾಪಗೊಳ್ಳುವ, ಅವನನ್ನು ದುಷ್ಟನೆಂದು ಪರಿಗಣಿಸುವ, ಮತ್ತು ಅತ್ಯಂತವಾಗಿ ಉಪೇಕ್ಷಿಸುವ ನಮ್ಮ ಹಕ್ಕನ್ನು ಇಚ್ಛಾಪೂರ್ವಕವಾಗಿ ಬಿಟ್ಟುಕೊಡುವುದು, ಹಾಗೂ ಅದೇ ಸಂದರ್ಭದಲ್ಲಿ ಆ ವ್ಯಕ್ತಿಯ ಬಗ್ಗೆ ಪ್ರೀತಿ, ಸಹಾನುಭೂತಿ ಮತ್ತು ಔದಾರ್ಯ ಮನೋಭಾವವನ್ನು ತಾಳುವುದು.'' ಅಂದರೆ ಇತರರ ತಪ್ಪನ್ನು ಕ್ಷಮಿಸುವುದೆಂದರೆ ಅವರ ಬಗೆಗಿನ ದುರ್ಭಾವವನ್ನು ಬಿಡುವುದು ಮಾತ್ರವಲ್ಲದೆ ಸದ್ಭಾವವನ್ನೂ ಹೊಂದಿರಬೇಕು. ಸದ್ಭಾವದಿಂದ ಪ್ರೇರಿತವಾದಾಗಲೇ ಕ್ಷಮಾಗುಣ ಸಾರ್ಥಕವಾಗುತ್ತದೆ. ಇದು ಸಾಧುತ್ವದ ಲಕ್ಷಣ :

**ಉಪಕಾರಿಷು ಯಃ ಸಾಧುಃ ಸಾಧುತ್ವೇ ತಸ್ಯ ಕೋ ಗುಣಃ ।**
**ಅಪಕಾರಿಷು ಯಃ ಸಾಧುಃ ಸ ಸಾಧುಃ ಸದ್ಭಿರುಚ್ಯತೇ ॥**

ಉಪಕಾರ ಮಾಡಿದವರ ವಿಷಯದಲ್ಲಿ ಸಾಧುವಾಗಿರುವುದು ವಿಶೇಷವೇನೂ ಅಲ್ಲ. ಆದರೆ ಅಪಕಾರ ಮಾಡಿದವರ, ನೋಯಿಸಿದವರ ವಿಷಯದಲ್ಲಿಯೂ ಯಾರು ಸಾಧುವಾಗಿರುತ್ತಾನೋ ಅವನೇ ನಿಜವಾದ ಸಾಧು.

**ಸತತಂ ಸಂತುಷ್ಟಃ :** ಭಗವದ್ಭಕ್ತನು ಯಾವಾಗಲೂ ಸಂತುಷ್ಟನಾಗಿರುತ್ತಾನೆ. 'ನನ್ನಲ್ಲಿ ಸಾಕಷ್ಟು ಭಕ್ತಿ ಇಲ್ಲ, ಸಾಕಷ್ಟು ವೈರಾಗ್ಯವಿಲ್ಲ'– ಎಂಬೀರೀತಿಯ ಅತೃಪ್ತಿ ಅವನಲ್ಲಿರಬಹುದೇ ಹೊರತು ಪ್ರಾಪಂಚಿಕ ವಿಷಯದಲ್ಲಿ ಅತೃಪ್ತಿ ಇರುವುದೇ ಇಲ್ಲ. ಕ್ರೈಸ್ತ ಸಂತಳಾದ ಅವಿಲಾದ ಥೆರೇಸಾ (ಮದರ್ ಥೆರೇಸಾ ಅಲ್ಲ) ಹೇಳುತ್ತಾಳೆ : ಪ್ರೀತಿ, ವಿನಯ ಮತ್ತು ವೈರಾಗ್ಯ – ಈ ಮೂರು ಗುಣಗಳ ಒಂದು ವೈಶಿಷ್ಟ್ಯವೆಂದರೆ ತಮ್ಮನ್ನು ಪಡೆದಿರುವವನಿಂದ ಅವು ಮರೆಯಾಗಿರುತ್ತವೆ. ಎಷ್ಟರ ಮಟ್ಟಿಗೆಂದರೆ ಅವುಗಳು ತನ್ನಲ್ಲಿರುವುದೆ ಅವನಿಗೆ ಗೊತ್ತಾಗುವುದಿಲ್ಲ, ಬೇರೆಯವರು ಹೇಳಿದರೂ ಕೂಡ ಅವನು ನಂಬುವುದಿಲ್ಲ.

**ಯದೃಚ್ಛಾಲಾಭಸಂತುಷ್ಟ**ನಾಗಿರುವುದು ಭಕ್ತನ ಲಕ್ಷಣ. ನಮ್ಮಲ್ಲಿರುವುದಕ್ಕಿಂತ ಹೆಚ್ಚಿನದನ್ನು ನಾವು ಬಯಸುತ್ತ ಹೋದರೆ ಇರುವುದರ ಸುಖವನ್ನೂ ಅನುಭವಿಸಲಾರೆವು, ಹಾಗೂ ಈ ಬಯಕೆಗೆ ಕೊನೆಯೇ ಇರುವುದಿಲ್ಲ. ಆದ್ದರಿಂದಲೇ 'ಸಂತೃಪ್ತಿಯೇ ಸಿರಿತನ, ಅಸಂತೃಪ್ತಿಯೇ ಬಡತನ' ಎಂದು ಹೇಳಿರುವುದು. ಸಂತ ಥೆರೇಸಾ ಹೇಳುತ್ತಾರೆ : ''ನನ್ನಲ್ಲಿ ಅತ್ಯಂತ ಕಡಮೆ ಇರುವಾಗಲೇ

ಚಿಂತೆಯೂ ಅತ್ಯಂತ ಕಡಮೆ ಇರುತ್ತದೆ. ನನ್ನಲ್ಲಿ ಯಾವುದಾದರೂ ಅತಿಯಾಗಿ ದ್ದಾಗ ಇರುವಷ್ಟು ಸಂಕಟ, ಅದರ ಕೊರತೆಯಲ್ಲಿ ಇರುವುದಿಲ್ಲ.'' ಇಲ್ಲಿ ಭರ್ತೃಹರಿಯ ಮಾತು ಸ್ಮರಣಾರ್ಹ : **ಮನಸಿ ಚ ಪರಿತುಷ್ಟೇ ಕೋ ದರಿದ್ರಃ ಕೋಽರ್ಥವಾನ್** – 'ಮನಸ್ಸಿನಲ್ಲಿ ಸಂತೃಪ್ತಿಯಿದ್ದರೆ ದರಿದ್ರನಾರು, ಶ್ರೀಮಂತನಾರು?'

ಹಲವು ಬಗೆಯ ಸಂತೃಪ್ತಿಯನ್ನು ನಾವು ಗುರುತಿಸಬಹುದು. ಮೊದಲನೆಯದಾಗಿ, ಪ್ರಾಪಂಚಿಕ ವಿಷಯದಲ್ಲಿ ಸಂತೃಪ್ತಿ ಇರಬೇಕು. ನಮಗೆಷ್ಟು ಪ್ರಾಪ್ತವೊ ಅಷ್ಟರಲ್ಲಿ ತೃಪ್ತಿಯಿಂದಿರುವು ದನ್ನು ಕಲಿಯಬೇಕು. ಇಲ್ಲದಿದ್ದರೆ ಮನಸ್ಸಿಗೆ ಅಶಾಂತಿ. ಎರಡನೆಯದಾಗಿ, ಪರಿಸ್ಥಿತಿಯ ವಿಷಯದಲ್ಲಿ ಸಂತೃಪ್ತಿ ಇರಬೇಕು. ಇದಿಲ್ಲದಿದ್ದರೆ ವ್ಯಕ್ತಿಯು ತನ್ನ ಪಾಲಿನ ಕೆಲಸದ ಬಗ್ಗೆ, ವಾತಾವರಣದ ಬಗ್ಗೆ, ಸುತ್ತಲಿನ ಜನರ ಬಗ್ಗೆ ಯಾವಾಗಲೂ ದೂರುತ್ತ ಇರುತ್ತಾನೆ. ಇದರಿಂದ ತಾನೂ ಅಸಂತೋಷವನ್ನು ಅನುಭವಿಸಿ ಇತರರಿಗೂ ಅಸಂತೋಷವನ್ನು ಉಂಟುಮಾಡುತ್ತಾನೆ. ಮೂರನೆಯದಾಗಿ, ತನ್ನ ಪಾಲಿಗೆ ದಕ್ಕಿರುವ ಸ್ಥಾನ, ಮಾನ, ಅಧಿಕಾರ, ಕೀರ್ತಿ ಇತ್ಯಾದಿಗಳ ವಿಷಯದಲ್ಲಿ ಸಂತೃಪ್ತಿ. ಅತ್ಯಂತ ನಗಣ್ಯ ವ್ಯಕ್ತಿಯಾಗಿದ್ದೂ ಸಂತೋಷದಿಂದ ಇರುವುದು ಸಾಧ್ಯವಾದರೆ ಅದರಲ್ಲಿ ಅಪಾರ ಸುಖ ಶಾಂತಿ ಇದೆ. ನಗಣ್ಯತೆಯಲ್ಲಿ ಅಗಣ್ಯ ಸುಖವಿದೆ. ಇಂಗ್ಲಿಷಿನ ಈ ಹೇಳಿಕೆ ತುಂಬ ಅರ್ಥಪೂರ್ಣ : ''ಸಾಧಾರಣ ಜೀವನ ನಡೆಸಲು ಸಿದ್ಧನಿರುವ ವ್ಯಕ್ತಿಯು ಅಸಾಧಾರಣ ವ್ಯಕ್ತಿ. ಅಸಾಧಾರಣನಾಗಿರಬೇಕೆಂಬುದು ಅತ್ಯಂತ ಸಾಧಾರಣ ಬಯಕೆ. ಆರಾಮವಾಗಿ ಸಾಧಾರಣ ವ್ಯಕ್ತಿಯಾಗಿರುವುದೇ ನಿಜವಾಗಿಯೂ ಅಸಾಧಾರಣ.''

ನಾಲ್ಕನೆಯದಾಗಿ, ಆಧ್ಯಾತ್ಮಿಕ ಪ್ರಗತಿಯ ವಿಷಯದಲ್ಲಿಯೂ ಸಂತೃಪ್ತಿ ಇರಬೇಕು. ಇಷ್ಟೆಲ್ಲ ಸಾಧನೆ ಮಾಡಿದರೂ ಏನೂ ಆಗಿಲ್ಲ, ಸ್ವಲ್ಪವೂ ಮುಂದುವರಿದಿಲ್ಲ ಎಂದು ಕೆಲವರು ಪರಿತಪಿಸುತ್ತಾರೆ. ಈ ರೀತಿಯ ಅಸಮಾಧಾನವೇ ಪ್ರಗತಿಗೆ ಅಡಚಣೆಯಾಗಬಹುದು. ಆಧ್ಯಾತ್ಮಿಕವಾಗಿ ಏನನ್ನು ಪಡೆದಿರುವೆವೊ ಅಷ್ಟರಿಂದಲೇ ತೃಪ್ತರಾಗಿ ಕುಳಿತುಬಿಡುವುದು ಸರಿಯಲ್ಲ – ದಿವ್ಯ ಅಸಂತೃಪ್ತಿ ಇರಬೇಕು. ಅಂದಮಾತ್ರಕ್ಕೆ ನಾವೇನನ್ನು ಪಡೆದಿರುವೆವೊ ಅದನ್ನು ಗುರುತಿಸದೆ, ಅದಕ್ಕಾಗಿ ಭಗವಂತನಿಗೆ ಕೃತಜ್ಞತೆಯನ್ನು ಅರ್ಪಿಸದಿರಬೇಕೆಂದಲ್ಲ.

ಆಫ್ರಿಕದಲ್ಲಿ ಟೇಸ್ಟ್‌ಬೆರಿ (taste-berry) ಎಂಬ ಹಣ್ಣಿದೆಯಂತೆ. ಅದನ್ನು ತಿಂದು ಅನಂತರ ಬೇರೆ ಎಂತಹ ಅರುಚಿಕರವಾದುದನ್ನು ತಿಂದರೂ ಅದು ರುಚಿಯಾಗಿರುತ್ತಂತೆ. ಕಹಿಯೂ ಸಿಹಿಯಾಗಿಬಿಡುವುದಂತೆ. ಹಾಗೆಯೇ ಮನಸ್ಸಿನಲ್ಲಿ ಸಂತೃಪ್ತಿಯಿದ್ದರೆ ಎಲ್ಲವೂ ಸಂತೋಷದಾಯಕವಾಗುತ್ತದೆ. *

*(ಮುಂದುವರಿಯುವುದು)*

# ಆಧ್ಯಾತ್ಮಿಕ ಸಂಭಾಷಣೆ



## ಸ್ವಾಮಿ ಭೂತೇಶಾನಂದಜೀಯವರೊಂದಿಗೆ

ಕನ್ನಡ ಅವತರಣಿಕೆ : ಸ್ವಾಮಿ ಮಂಗಳಾತ್ಮಾನಂದ

**ಪ್ರಶ್ನೆ:** ಶ್ರೀರಾಮಕೃಷ್ಣರು ಒಂದೆಡೆ ಹೇಳುತ್ತಾರೆ, 'ಯಾರು ನನ್ನನ್ನು ಒಂದು ಸಲ ಆಂತರಿಕ ಭಕ್ತಿಯಿಂದ ಕರೆಯುತ್ತಾರೋ, ಅವರು ಇಲ್ಲಿಗೆ ಬರಲೇಬೇಕು.' ಇಲ್ಲಿಗೆ, ಬರಲೇಬೇಕು – 'ಇಲ್ಲಿ' ಎಂಬುದರ ಅರ್ಥವೇನು, ಮಹಾರಾಜ್?

**ಮಹಾರಾಜ್:** ಇದು ಶ್ರೀರಾಮಕೃಷ್ಣರ ಮಾತಲ್ಲ. ಅವರು ಹೇಳುತ್ತಿದ್ದರು, 'ಯಾರಿಗೆ ಭಗವಂತನ ಮೇಲೆ ನಿಜವಾಗಿಯೂ ವಿಶ್ವಾಸ ಇದೆಯೋ, ಅವರು ಇಲ್ಲಿಗೆ ಬರಲೇಬೇಕಾಗುತ್ತದೆ' ಎಂದು.

**ಪ್ರಶ್ನೆ:** ಪರಮಹಂಸರು ಹೇಳುತ್ತಿದ್ದರು 'ಯಾರು ಇಲ್ಲಿಗೆ ಬರುತ್ತಾರೋ, ಅವರಿಗೆ ಇದೇ ಕೊನೆಯ ಜನ್ಮ' ಎಂದು. ಇದರ ತಾತ್ಪರ್ಯವೇನು?

**ಮಹಾರಾಜ್:** ಯಾರು ಇಲ್ಲಿಗೆ ಬರುತ್ತಾರೋ ಅವರದು ಕೊನೆಯ ಜನ್ಮ. ಅವರು ಇನ್ನು ಜನ್ಮ ಧರಿಸಬೇಕಾಗಿಲ್ಲ. ಗೀತೆಯ ಭಾಷೆಯಲ್ಲಿ ಹೇಳಿದರೆ ಅರ್ಥವಾಗಬಹುದು – **'ಜನ್ಮಬಂಧ ವಿನಿರ್ಮುಕ್ತ.'** ಹಾಗಾದರೆ ಶ್ರೀರಾಮಕೃಷ್ಣರ ಭಾಷೆಯಲ್ಲಿ ಹೇಳಿದರೆ ಅರ್ಥವಾಗದೆ? **'ಜನ್ಮಬಂಧ ವಿನಿರ್ಮುಕ್ತಾಃ ಪದಂ ಗಚ್ಛಂತ್ಯನಾಮಯಮ್.'**

**ಪ್ರಶ್ನೆ:** ಶ್ರೀರಾಮಕೃಷ್ಣರು ಹೇಳುತ್ತಾರೆ 'ಯಾರು ಇಲ್ಲಿಗೆ ಬರುತ್ತಾರೊ ಅವರಿಗೆ ಇದೇ ಕೊನೆಯ ಜನ್ಮ' ಎಂದು. ಹಾಗಾದರೆ, ಅವರು ದೇಹ ಧರಿಸಿದ್ದಾಗ, ಅವರ ಹತ್ತಿರ ಬಂದವರೆಲ್ಲ ಮುಕ್ತರಾಗಿದ್ದಾರೆ. ಈಗ ನಮ್ಮ ಗತಿಯೇನು? ಶ್ರೀಮಾತೆಯವರು ಸಂದರ್ಭೋಚಿತವಾಗಿ ಹೇಳುತ್ತಿದ್ದರು, 'ಎಲ್ಲಿಯತನಕ ಒಂದಿಷ್ಟಾದರೂ ಭೋಗವಾಸನೆ ಇರುತ್ತದೋ, ಅಲ್ಲಿಯತನಕ ಪುನರ್ಜನ್ಮ ಇದ್ದೇ ಇದೆ. ಇಲ್ಲಿಗೆ ಬಂದ ಮೇಲೂ, ಭಗವನ್ನಾಮಸ್ಮರಣೆ ಮಾಡಿದ ಮೇಲೂ, ಯಾರೋ ಒಬ್ಬರ ಮನಸ್ಸಿನಲ್ಲಿ ಕಾಮನೆಗಳು ಬಂದು ಮಾಯೆಯ ತೆಕ್ಕೆಯೊಳಗೆ ಬಿದ್ದರೆ ಅಂತಹವರಿಗೆ ಮುಕ್ತಿ ಇಲ್ಲ' ಎಂದು. ಇಬ್ಬರ ಮಾತುಗಳಲ್ಲಿ ವಿರೋಧಾಭಾಸವಿದೆಯಲ್ಲವೇ ಮಹಾರಾಜ್?

**ಮಹಾರಾಜ್:** ಹೌದು, ಸಂಗತಿ ಇಷ್ಟೆ: ನಮ್ಮಲ್ಲಿ ಭೋಗವಾಸನೆ ಇದ್ದರೆ ನಾವು ಸ್ವಾಭಾವಿಕವಾಗಿ ಪುನಃ ಬರಲೇಬೇಕಾಗುತ್ತದೆ.

**ಪ್ರಶ್ನೆ:** ಯಾರು ಇಲ್ಲಿಗೆ ಬರುತ್ತಾರೋ, ಅವರದು ಕೊನೆಯ ಜನ್ಮ; ಭೋಗವಾಸನೆ ರವಷ್ಟು ಇದ್ದರೂ ಜನ್ಮಧಾರಣೆ ಮಾಡಬೇಕಾಗುತ್ತದೆ. ಎರಡೂ ವಾಕ್ಯಗಳ ಅರ್ಥ ಬೇರೆ ಬೇರೆ ಆಯಿತಲ್ಲವೆ?

**ಮಹಾರಾಜ್:** ಅವರೆಲ್ಲ ಇಲ್ಲಿಗೆ ಬಂದಿರಲಿಲ್ಲ, ಅವರೆಲ್ಲ ಬಂದದ್ದು ಸಂತೆ ನೋಡಲು.

**ಪ್ರಶ್ನೆ:** ಹಾಗಾದರೆ 'ಇಲ್ಲಿಗೆ ಬಂದರೆ' ಎಂಬುದರ ಅರ್ಥವೇನು?

**ಮಹಾರಾಜ್:** ಇಲ್ಲಿಗೆ ಬಂದವರು, ಎಂದರೆ ಯಾರು ಅವರ ಜೀವನವನ್ನು ಇಲ್ಲಿಗೆ ಸಮರ್ಪಿಸಿದ್ದರೋ ಅವರು. ಆತನ (ಪರಮಾತ್ಮ) ಭಾವವನ್ನು ಸ್ವೀಕರಿಸಿದವರು. ಪರಿಪೂರ್ಣಭಾವದಿಂದ, ಸರ್ವಾಂತಃಕರಣ ಭಾವದಿಂದ, ಇದೇ 'ಇಲ್ಲಿಗೆ' ಎಂಬುದರ ಅರ್ಥ.

**ಪ್ರಶ್ನೆ:** ಶ್ರೀರಾಮಕೃಷ್ಣರು ಹೇಳುತ್ತಿದ್ದರು, ಮಥುರ ಬಾಬು ಪುನಃ ಜನ್ಮವೆತ್ತಬೇಕಾಗಿದೆ, ಆತನ ಭೋಗವಾಸನೆ ಇನ್ನೂ ಇದೆ ಅಂತ?

**ಮಹಾರಾಜ್:** ಹಾಂ, ಹೇಳುತ್ತಿದ್ದರು, ಪುನಃ ಎಲ್ಲಿಯಾದರೂ ರಾಜ–ಗೀಜ ಆಗುತ್ತಾನೆಂದು. ರಾಜನಾಗಿ ಬಂದು ಪುನಃ ಭೋಗಜೀವನ ನಡೆಸಿ ಕಷ್ಟವನ್ನೂ ಅನುಭವಿಸುತ್ತಾನೆ. ಕಾರಣ, ರಾಜನಾಗಿ ಬರುವುದೆಂದರೆ, ಪ್ರಜೆಗಳ ವಿಪತ್ತುಗಳನ್ನು ತನ್ನ ಹೆಗಲಮೇಲೆ ಹೊತ್ತುಕೊಳ್ಳುವುದು ಎಂದರ್ಥ.

**ಪ್ರಶ್ನೆ:** ಜನ್ಮಧಾರಣೆ ಎಂದರೇನೇ, ಕಷ್ಟ ಅನುಭವಿಸುವುದು !

**ಮಹಾರಾಜ್:** ಶ್ರೀರಾಮಕೃಷ್ಣರು ಹೇಳುತ್ತಿದ್ದರು, ಮಥುರನಿಗೆ ಭೋಗಜೀವನ ಉಳಿದಿದೆ, ಅಂತ. 'ಅದೇನು ಮಹಾ, ಹೃದಯನೇ ಬರಬೇಕು, ಅತನ ಭೋಗವಾಸನೆ ಇನ್ನೂ ಮುಗಿದಿಲ್ಲ' ಎನ್ನುತ್ತಿದ್ದರು.

**ಪ್ರಶ್ನೆ:** ಹೃದಯ ಎಷ್ಟೊಂದು ಕಾಲ ಶ್ರೀರಾಮಕೃಷ್ಣರ ಜೊತೆಗಿದ್ದ, ಏನು ಸೇವೆ ಮಾಡಿದ್ದ! ಆದರೂ ಅವನಿಗೆ ಏನೂ ಸಿಗಲಿಲ್ಲ!

**ಮಹಾರಾಜ್:** ಸುತರಾಂ ಏನೂ ಆಗಿಲ್ಲ. ಸ್ವಲ್ಪ ಬುದ್ಧಿ ಇರುವವರು ತಿಳಿದುಕೊಳ್ಳಿ, ನಿಮ್ಮ ಗತಿ ಏನು – ಅಂತ.

**ಪ್ರಶ್ನೆ:** ಶ್ರೀರಾಮಕೃಷ್ಣರು ಹೇಳುತ್ತಿದ್ದರು, ಶುದ್ಧ ಮನಸ್ಸು ಮತ್ತು ಶುದ್ಧ ಆತ್ಮ ಒಂದೇ ಎಂದು. ಆದರೆ ಮನಸ್ಸು ಜಡವಸ್ತು. ಪ್ರಕೃತಿಯಿಂದ ಬಂದಿದೆ. ಇದು ಹೇಗೆ ಆತ್ಮದ ಜೊತೆ ಒಂದಾಗುತ್ತದೆ?

**ಮಹಾರಾಜ್:** ಮನಸ್ಸು ಬ್ರಹ್ಮದಲ್ಲಿ ಆರೋಪಿತ ವಸ್ತು. ಇಲ್ಲದಿದ್ದರೆ ಅದು ಪ್ರಕಾಶಕ್ಕೆ ಬರುತ್ತಿರಲಿಲ್ಲ. ಯಾವುದು ಆರೋಪಿತ ಗೊತ್ತೆ? ಚೈತನ್ಯವಸ್ತು ಆರೋಪಿತವಾದರೆ ಆಗ ಪ್ರಕಾಶಿಸಲ್ಪಡುತ್ತದೆ. ಬ್ರಹ್ಮದಲ್ಲಿ ಮನಸ್ಸು ಆರೋಪಿತವಾದರೆ ಆಗಲೇ ಮನಸ್ಸು ಪ್ರಕಾಶಿಸಲ್ಪಡುತ್ತದೆ. ಆದ್ದರಿಂದ ಮನಸ್ಸು ಬ್ರಹ್ಮ–ಆರೋಪಿತ. ಈ ಮನಸ್ಸೆಂದರೆ ಮನಸಾವಚ್ಛಿನ್ನ (ಬೇರ್ಪಡಿಸಲ್ಪಟ್ಟ) ಬ್ರಹ್ಮ. ಹಾಗಾದರೆ ಅದು ಶುದ್ಧ ಹೇಗೆ ಆಗುತ್ತದೆ? ಆರೋಪದಿಂದ ಲೋಪವಾಗುತ್ತದೆ. ಆಗ ಏನು ಉಳಿಯಿತು? ಬ್ರಹ್ಮ ಒಂದೇ ಉಳಿಯಿತು. ಇದರ ಲೆಕ್ಕ ಇಲ್ಲಿ ಸಿಕ್ಕಿದ ಹಾಗಾಯಿತು. ಶ್ರೀರಾಮಕೃಷ್ಣರು ಹೇಳುವುದು, 'ಶುದ್ಧ ಮನಸ್ಸು ಒಂದೇ' ಎಂದು. ಶುದ್ಧ ಬುದ್ಧಿ ಹಾಗೂ ಶುದ್ಧ ಆತ್ಮವೂ ಒಂದೇ. ಹೇಗೆ ಹೇಳಿದರೂ ಕೊನೆಗೆ ಒಂದೇ ವಿಚಾರವಾಯಿತು.

**ಪ್ರಶ್ನೆ:** ಭಗವಂತ ಗೀತೆಯಲ್ಲಿ ಹೇಳುತ್ತಾನೆ:

**ನ ಮಾಂ ಕರ್ಮಾಣಿ ಲಿಂಪಂತಿ ನ ಮೇ ಕರ್ಮಫಲೇ ಸ್ಪೃಹಾ।**
**ಇತಿ ಮಾಂ ಯೋಽಭಿಜಾನಾತಿ ಕರ್ಮಭಿರ್ನ ಸ ಬದ್ಧ್ಯತೇ॥ (೪-೧೪)**

ಇಲ್ಲಿ ಭಗವಂತ ಕರ್ಮದಿಂದ ಬಂಧಿತನಾಗಿಲ್ಲ, ಕರ್ಮದ ಫಲದಿಂದಲೂ ಆಗಿಲ್ಲ. ಹಾಗಾದರೆ ಸಾಧಕನು ಕರ್ಮದ ಮೂಲಕ ಬದ್ಧನಾಗುವುದಿಲ್ಲ, ಎರಡೂ ಒಂದೇ ರೀತಿಯೇನು, ಮಹಾರಾಜ್?

**ಮಹಾರಾಜ್:** ಆತ ಕರ್ಮಬಂಧನದಲ್ಲಿ ಬೀಳುವುದಿಲ್ಲ ಎಂದು ಹೇಳಲಾಗಿದೆ. ಭಗವಂತನು ದೇಹ ಧರಿಸಿದರೂ ಕರ್ಮಬಂಧನದಲ್ಲಿ ಬದ್ಧನಾಗಿರುವುದಿಲ್ಲ. ಸಾಧಕನು ತಿಳಿದುಕೊಳ್ಳಬೇಕು, ತಾನು ದೇಹ ಧಾರಿಯಾದರೂ ಕರ್ಮಬಂಧನದಿಂದ ಬದ್ಧನಲ್ಲವೆಂದು.

**ಪ್ರಶ್ನೆ:** ಭಗವಂತನ ಗುಣಗಳನ್ನು ಅಥವಾ ಸ್ವರೂಪವನ್ನು ಸಾಧಕನು ಸ್ವತಃ ಆರೋಪಿಸುತ್ತಾನೆ, ನಿಯಮ ಇದೇ ತಾನೇ? ಹಾಗಾದರೆ ನಾವು ಇವುಗಳಿಂದ, ಕರ್ಮದ ಮೂಲಕ ಮುಕ್ತರಾಗುತ್ತೇವೆಯೆ? ಈ ಪ್ರಶ್ನೆ ಹಾಗೆಯೇ ಉಳಿದು ಹೋಯಿತು. ಭಗವಂತನು ಪೂರ್ಣ ಕಾಮ, ಆದರೆ ನಾವು ಹಾಗಲ್ಲ.

**ಮಹಾರಾಜ್:** ನಾವು ತಿಳಿಯುವುದು ಎಂದರೆ, ಇದನ್ನು ಅರ್ಥ ಮಾಡಲು ಪ್ರಯತ್ನಪಡುವುದು. ಪ್ರಾರಂಭದಲ್ಲಿಯೇ ಎಲ್ಲವನ್ನೂ ತಿಳಿಯಲಿಕ್ಕೆ ಆಗುವುದಿಲ್ಲ. ಇದನ್ನು ಅರಿತರೆ ಒಬ್ಬನು ಕರ್ಮದಲ್ಲಿ ಬದ್ಧನಾಗುವುದಿಲ್ಲ. ವಿಚಾರ ಹೀಗಿದೆ.

**ಪ್ರಶ್ನೆ:** ನಮ್ಮಲ್ಲಿ ಒಂದು ಮಾತಿದೆ, ಗೃಹಸ್ಥ ಪಂಡಿತರ ಹತ್ತಿರ ವಿದ್ಯಾರ್ಥಿ ಆಗದೆ, ಸಾಧುಗಳ ಹತ್ತಿರವೇ ಕಲಿಯಬೇಕು ಅಂತ.

**ಮಹಾರಾಜ್:** ಗೃಹಸ್ಥ ಅಥವಾ ಸಾಧು, ಈ ರೀತಿ ಏಕೆ ವಿಂಗಡಿಸುವೆ? ತತ್ತ್ವಜ್ಞ ಅಥವಾ ತತ್ತ್ವಾನ್ವೇಷಿಯ ಬಳಿ ಕಲಿಯಬಹುದು.

**ಪ್ರಶ್ನೆ:** ಕೆಲವು ಪಂಡಿತರು ಶಾಸ್ತ್ರ ಓದುವುದಕ್ಕೆ ಮೊದಲು 'ಹನ್ನೆರಡು ವರ್ಷ ವ್ಯಾಕರಣ ಓದಿ ಬಾ' ಎನ್ನುತ್ತಾರೆ.

**ಮಹಾರಾಜ್:** ಹೌದು, ಹನ್ನೆರಡು ವರ್ಷ ವ್ಯಾಕರಣವನ್ನೂ ಓದಲಾಗಲಿಲ್ಲ, ಇನ್ನು ಶಾಸ್ತ್ರವನ್ನೂ ಓದಲಾಗಲಿಲ್ಲ.

**ಪ್ರಶ್ನೆ:** ಕೆಲವು ಸಲ ಹೀಗೆ ಆಗುತ್ತದೆ. ಅಧ್ಯಯನ ಮಾಡಲು ಇಷ್ಟವಿದ್ದರೂ ಒಂದೊಂದು ಕಡೆ ನಮ್ಮನ್ನು ಕಳುಹಿಸುತ್ತಾರೆ. ಅಲ್ಲಿ ಕೆಲಸದ ಒತ್ತಡ ಎಷ್ಟಿರುತ್ತದೆಂದರೆ, ಅಧ್ಯಯನಕ್ಕೆ ಸಮಯವೇ ಸಿಗುವುದಿಲ್ಲ.

**ಮಹಾರಾಜ್:** ಅಷ್ಟೊಂದು ಕೆಲಸ ಯಾರೂ ಮಾಡುವುದಿಲ್ಲ, ಕೆಲಸದ ಒತ್ತಡದಲ್ಲಿ ಅಧ್ಯಯನ ಮಾಡಲು ಸಮಯ ಸಿಗುವುದಿಲ್ಲ ಎನ್ನಲು.

**ಪ್ರಶ್ನೆ:** ನಾನು ಸ್ವತಃ reliefಗೆ (ಪರಿಹಾರ) ಹೋಗಿಲ್ಲ, ಆದರೆ ಹೇಳುವುದನ್ನು ಕೇಳಿದ್ದೇನೆ, ಅಲ್ಲಿ ಸ್ವಲ್ಪವೂ ಸಮಯ ಸಿಗುವುದಿಲ್ಲ ಎಂದು.

**ಮಹಾರಾಜ್:** ಈ ಮಾತಿನಲ್ಲಿ ಲವಲೇಶವೂ ಸತ್ಯವಿಲ್ಲ. ನೀನೇ ಹೇಳು, ಊಟಕ್ಕೆ ಸಮಯವಿದೆ ತಾನೇ? ನಿದ್ದೆ ಮಾಡಲು ಸಮಯ ಸಿಗುತ್ತದೆ ತಾನೇ? ಹರಟೆ ಹೊಡೆಯಲು, ಅಡ್ಡಾಡಲು ಸಮಯವಿದೆ ತಾನೇ? ಶ್ವಾಸೋಚ್ಛ್ವಾಸ ಮಾಡಲು ಸಮಯವಿದೆ ತಾನೇ?

**ಪ್ರಶ್ನೆ:** ಅಂದರೆ ಅಷ್ಟರೊಳಗೇ ಸಮಯ ಮಾಡಿಕೊಳ್ಳಬೇಕಾಗುತ್ತದೆ.

**ಮಹಾರಾಜ್:** ಅದೇ ನಿಜವಾದ ಮಾತು. ಸಮುದ್ರ ಸ್ನಾನಕ್ಕೆ ಹೋಗಿ ತೆರೆ ನಿಂತ ಮೇಲೆ ಸ್ನಾನಮಾಡುತ್ತೇನೆ ಎಂದರೆ, ಎಂದಿಗೂ ಸ್ನಾನ ಆಗದು. ಏನೇನು ಮಾಡಬೇಕೋ, ಇದರೊಳಗೆಯೇ ಮಾಡಬೇಕು. ಇಲ್ಲಿ ಸ್ವ-ಇಚ್ಛೆಯೇ ಮುಖ್ಯವಾದ ವಿಚಾರ.

**ಪ್ರಶ್ನೆ:** ಕೆಲಸ ಕಾರ್ಯಗಳ ಮಧ್ಯೆ ಬಿಡುವೇನೋ ಸಿಗಬಹುದು. ಆದರೆ ಆ ಸಮಯದೊಳಗಾಗಿ ಶಾಸ್ತ್ರದ ಅಧ್ಯಯನ, ಶಾಸ್ತ್ರಾರ್ಥ ಚಿಂತನೆ ಇವುಗಳನ್ನು ಮಾಡಲು ಸರಿಯಾದ mood ಅಥವಾ attitude (ಮನೋಭಾವ) ಇರುವುದಿಲ್ಲ.

**ಮಹಾರಾಜ್:** ಆ mood ಸೃಷ್ಟಿ ಮಾಡಲು ಅಭ್ಯಾಸ ಮಾಡಬೇಕಾಗುತ್ತದೆ. ನಿಜವಾಗಿ ಹೇಳುವುದಾದರೆ, ಬಾಹ್ಯ ತೊಂದರೆಗಳಿಗಿಂತ, ಆಂತರಿಕ ತೊಂದರೆಗಳು ಪ್ರಬಲವಾಗಿರುತ್ತವೆ. ಇದಕ್ಕಾಗಿ ಅಂತರ್ಮುಖಿಯಾಗಬೇಕು. ದೀರ್ಘಸಮಯದಿಂದ ಇದನ್ನು ಅಭ್ಯಾಸ ಮಾಡಿ completely absorbed ಆಗದಿದ್ದರೆ ಸಾಧ್ಯವಿಲ್ಲ. ಒಬ್ಬರು ಸಾಧುಗಳು ಸಾಧನೆ ಭಜನೆ ಮಾಡಲೆಂದು ನಿರ್ಜನ ಜಾಗವನ್ನು ಹುಡುಕುತ್ತಿದ್ದರು. ಒಂದಲ್ಲ ಒಂದು ಸಮಸ್ಯೆ ಪ್ರತಿ ಗುಹೆಯಲ್ಲಿಯೂ ಎದುರಾಗುತ್ತಿತ್ತು. ಕೊನೆಗೂ ಒಂದು ಅತ್ಯಂತ ನಿರ್ಜನವಾದ, ಪ್ರಶಸ್ತವಾದ ಗುಹೆ ಸಿಕ್ಕಿತು. ಈ ಸಾಧುಗಳು ಅಲ್ಲಿ ತನ್ನ ಆಸನವನ್ನು ಹಾಸಿದರು. ಆ ಗುಹೆಯ ಎದುರುಗಡೆ ಒಂದಷ್ಟು ಪಕ್ಷಿಗಳು ಚಿಲಿಪಿಲಿಗುಟ್ಟುತ್ತಿದ್ದವು. ಇದರಿಂದ ಬೇಸರಗೊಂಡ ಸಾಧು, ಬೇರೆಕಡೆ ಗುಹೆ ಹುಡುಕಲು ಆರಂಭಿಸಿದರು. ಇದನ್ನು ನೋಡಿದ ವೃದ್ಧ ಸಾಧುಗಳೊಬ್ಬರು, ''ಏನು ಮಹಾತ್ಮರೆ? ಮೊದಲು ನಿಮ್ಮ ಮನಸ್ಸಿನೊಳಗೆ ಚಿಲಿಪಿಲಿಗುಟ್ಟುವುದನ್ನು ನಿಲ್ಲಿಸಿ'' ಎಂದರು. ಇದು ನಮ್ಮ ಸ್ಥಿತಿ.

ನನ್ನ ಜೀವನದ ಒಂದು ಘಟನೆ ಇಲ್ಲಿ ಹೇಳಿದರೆ ಅಪ್ರಸ್ತುತವಾಗದು. ಆಗ ನಾನು ಉತ್ತರಕಾಶಿಯಿಂದ ಸ್ವಲ್ಪ ಕೆಳಗಿಳಿದು ಒಂದು ಒಂದು ಗುಹೆಯಲ್ಲಿದ್ದೆ. ದಿನಕ್ಕೊಂದು ಬಾರಿ ಭಿಕ್ಷೆ ತರುತ್ತಿದ್ದೆ; ಬಹಳ ಆನಂದವಾಗಿದ್ದೆ. ಒಂದು ದಿನ ಗುಹೆಯ ಒಳಗಿದ್ದೆ, ಹಠಾತ್ತನೆ ತುಂಬ ಗದ್ದಲ ಕೇಳಿಸಿತು. ಏನಿದು ಗಲಾಟೆ ಎಂದು ನೋಡಲು ಹೊರಬಂದೆ. ನೋಡುತ್ತೇನೆ, ಒಂದು ರಾಜಕೀಯ ಪಕ್ಷದ ಜನರು ಗುಡಾರ ಹಾಕುತ್ತಿದ್ದಾರೆ. ಒಬ್ಬನಿಗೆ ಕೇಳಿದೆ, ''ನೀವು ಇಲ್ಲಿ ಎಷ್ಟು ದಿನ ಇರುತ್ತೀರಿ?'' ಆತ ಹೇಳಿದ, ''ಒಂದು ತಿಂಗಳು.'' ನಾನು ಯೋಚಿಸಿದೆ, ಒಂದು ತಿಂಗಳೆಂದರೆ 'ನನ್ನ ಸರ್ವನಾಶ.' ಇನ್ನು ಅಲ್ಲಿರಲಾಗದೆಂದು ಮರುದಿನ ಬೇರೊಂದು ನಿರ್ಜನವಾದ ಗುಹೆ ಹುಡುಕಲು ಆರಂಭಿಸಿದೆ. ನಿರ್ಜನ ಸ್ಥಳದಲ್ಲಿ ಒಂದು ಗುಹೆ ಸಿಕ್ಕಿತು. ಆದರೆ ಮಳೆಗಾಲವಾದ್ದರಿಂದ ಎಲ್ಲಾ ಕಡೆಯಿಂದ ಗುಹೆಯೊಳಗೆ ನೀರು ಬರುತ್ತಿತ್ತು. ಸರಿ, ಈ ಗುಹೆಯಲ್ಲಿರಲು ಅಸಾಧ್ಯವೆಂದು ಪುನಃ ಬೇರೆ ಗುಹೆ ಹುಡುಕಲು ಹೋದೆ. ಇನ್ನೊಂದು ಗುಹೆ ಸಿಕ್ಕಿತು. ಆದರೆ ಆ ಗುಹೆಯ ಎದುರುಗಡೆ ಇಡೀದಿನ ಜನರ ಗದ್ದಲ. ಕಾರಣ ಕುಡಿಯುವ ನೀರಿಗಾಗಿ ಜನರೆಲ್ಲ ಅಲ್ಲಿಗೆ ಬರುತ್ತಿದ್ದರು. ಈ ಗುಹೆ ಕೂಡ ಸಾಧ್ಯವಿಲ್ಲ. ಇಡೀ ದಿನ ತಿರುಗಾಡಿ ಅತ್ಯಂತ ದಣಿದುಹೋಗಿದ್ದೆ. ರಸ್ತೆಯಲ್ಲಿ ಒಂದು ಕಡೆ ಭಿಕ್ಷೆ ಬೇಡಿ ತಿಂದಿದ್ದಷ್ಟೆ. ಏನೇ ಇರಲಿ, ಮೊದಲ ಗುಹೆಗೇ ಹಿಂದಿರುಗಿದೆ. ದಿನವಿಡೀ ನಡೆದಾಡಿದ ಕಷ್ಟದಿಂದ ಶರೀರಕ್ಕೆ ತುಂಬಾ ದಣಿವು. ನನ್ನ ಮನಸ್ಸಿಗೆ ಬಂತು, 'ನಾನು ಯಾಕಾಗಿ ಇಷ್ಟೆಲ್ಲ ಕಷ್ಟಪಡಬೇಕು? ಭಗವಂತ ನನಗಾಗಿ ಎಲ್ಲ ವ್ಯವಸ್ಥೆ ಮಾಡಿಕೊಟ್ಟಿದ್ದ. ಆತನ ಮೇಲೆ ಭಾರ ಹಾಕಿ ನಾನೇಕೆ ನಿಶ್ಚಿಂತೆಯಲ್ಲಿರಬಾರದಿತ್ತು?' ಹೀಗೆ ಯೋಚಿಸುತ್ತಿದ್ದ ಹಾಗೆ, ಇಡಿ ದಿನದ ಶ್ರಮದಿಂದಾಗಿ ನಿದ್ದೆ ಬಂದಿತ್ತು. ಮರುದಿನ ಎದ್ದು ನೋಡುತ್ತೇನೆ, ಆ ಜನರೆಲ್ಲ ಡೇರೆ ಬಿಚ್ಚಿಕೊಂಡು ಎಲ್ಲಿಗೋ ಹೊರಟುಹೋಗಿದ್ದಾರೆ!



# ಯೋಗವಾಸಿಷ್ಠದ ಕಥೆಗಳು

ಸ್ವಾಮಿ ವೀರೇಶಾನಂದ

ಕಥಾಗುಚ್ಛ - ೧



ಗಹನವಾದ ವೇದಾಂತ ತತ್ತ್ವಗಳನ್ನು ಹಲವು ಸುಂದರ ಕಥೆಗಳ ಮೂಲಕ ಮನಸ್ಸಿಗೆ ತಟ್ಟುವಂತೆ ನಮ್ಮ ಮುಂದಿಡುವ ಒಂದು ಶ್ರೇಷ್ಠ ಗ್ರಂಥ 'ಯೋಗವಾಸಿಷ್ಠ.' ವಸಿಷ್ಠ ಮಹರ್ಷಿಗಳು ಶ್ರೀರಾಮನಿಗೆ ಹಲವು ಕಥೆಗಳ ಮೂಲಕ ತತ್ತ್ವೋಪದೇಶ ಮಾಡಿದಂತೆ ಇಲ್ಲಿನ ಚೌಕಟ್ಟನ್ನು ರಚಿಸಲಾಗಿದೆ. ಇಲ್ಲಿನ ತತ್ತ್ವವಿಚಾರಗಳಿಗೆ ಕುಂದು ಬರದಂತೆ, ಅದರ ಮಹತ್ತ್ವವೃದ್ಧಿಸುವಂತೆ ಈ ಕಥೆಗಳ ಸೊಗಸನ್ನು ನಿರೂಪಿಸುವ ಲೇಖಕರು 'ವಿವೇಕಪ್ರಭ'ದ ಹಿಂದಿನ ಸಂಪಾದಕರು. ಪ್ರಸ್ತುತ ಅವರು ಬೇಲೂರು ಮಠದ ಬ್ರಹ್ಮಚಾರಿ ಪ್ರಶಿಕ್ಷಣ ಕೇಂದ್ರದಲ್ಲಿ ಆಚಾರ್ಯರಾಗಿದ್ದಾರೆ.

## ಯುವಕ ರಾಮನ ವೈರಾಗ್ಯ

### ಕಥೆಯ ಮೂಲ

ಅಗಸ್ತ್ಯ ಮಹರ್ಷಿಯ ಬಳಿಗೆ ಸುತೀಕ್ಷ್ಣ ಎಂಬ ಋಷಿ ಬಂದು ಪ್ರಶ್ನಿಸುತ್ತಾನೆ: ''ಮಹರ್ಷಿಗಳೇ, ನನಗೊಂದು ಸಮಸ್ಯೆ ಕಾಡುತ್ತಿದೆ. ಮುಕ್ತಿಗೆ ಸೂಕ್ತವಾದ ಮಾರ್ಗ ಅದಾವುದು – ಕರ್ಮವೋ ಇಲ್ಲ ಜ್ಞಾನವೊ?''

ಅಗಸ್ತ್ಯರು ಅದಕ್ಕೆ ಹೀಗೆ ಉತ್ತರವೀಯುತ್ತಾರೆ: ''ಹಕ್ಕಿಗಳು ಹಾರಬೇಕಾದರೆ ಎರಡು ರೆಕ್ಕೆಗಳು ಬೇಕೇಬೇಕು, ಅಲ್ಲವೆ? ಅದೇ ರೀತಿ ಮುಕ್ತಿಯ ಪರಮ ಗುರಿಯನ್ನು ತಲುಪಲು ಕರ್ಮ ಮತ್ತು ಜ್ಞಾನಗಳೆರಡೂ ಬೇಕೇಬೇಕು. ಕರ್ಮವೊಂದೇ ಅಥವಾ ಜ್ಞಾನವೊಂದೇ ಮೋಕ್ಷದ ಕಡೆಗೆ ನಮ್ಮನ್ನು ಒಯ್ಯಲಾರದು. ನಿನ್ನ ಪ್ರಶ್ನೆಗೆ ಉತ್ತರವಾಗಿ ಕಥೆಯೊಂದನ್ನು ಹೇಳುತ್ತೇನೆ, ಕೇಳು: ಕಾರುಣ್ಯ ಎಂಬ ಹೆಸರಿನ ಯುವಕನು ಒಂದು ಊರಿನಲ್ಲಿ ವಾಸಿಸುತ್ತಿದ್ದನು. ಅವನು ಅಗ್ನಿವೇಷ್ಯ ಎನ್ನುವವನ ಮಗ. ಅವನು ಪವಿತ್ರಗ್ರಂಥಗಳನ್ನು ಅಧ್ಯಯನ ಮಾಡಿ ಕರಗತ ಮಾಡಿಕೊಂಡಿದ್ದನು. ಅವುಗಳ ಸಾರವನ್ನು ಅರಿತುಕೊಂಡಿದ್ದನು. ಆದರೆ ಆ ಯುವಕನು ಪ್ರಾಪಂಚಿಕ ಜೀವನದ ವಿಷಯದಲ್ಲಿ ವಿರಕ್ತನಾಗಿದ್ದನು. ದಿನನಿತ್ಯ ಮಾಡಬೇಕಾದ ಕರ್ತವ್ಯಗಳನ್ನು ತ್ಯಜಿಸಿಬಿಟ್ಟಿದ್ದನು. ಇದನ್ನು ಕಂಡ ಅವನ ತಂದೆ ಅಗ್ನಿವೇಷ್ಯನು, 'ಇದೇಕೆ ಹೀಗೆ?' ಎಂದು ಪ್ರಶ್ನಿಸಿದನು. ತಂದೆಗೆ ಕಾರುಣ್ಯ ಕೊಟ್ಟ ಉತ್ತರ ಹೀಗಿತ್ತು: ''ಅಪ್ಪಾ, ಬದುಕಿರುವವರೆಗೂ ವೈದಿಕ ವಿಧಿಗಳನ್ನು ಮಾಡುತ್ತಲೇ ಇರಬೇಕೆಂದು ಧರ್ಮಗ್ರಂಥಗಳು ಘೋಷಿಸುತ್ತವೆ. ಇನ್ನೊಂದೆಡೆ ಎಲ್ಲ ಕರ್ಮಗಳನ್ನು ತ್ಯಾಗ ಮಾಡಿದರೆ ಮಾತ್ರ ಮೋಕ್ಷಸಿದ್ಧಿ ಎಂದು ಅವುಗಳೇ ಹೇಳುತ್ತವೆ. ಈ ವಿರುದ್ಧ ಅಭಿಪ್ರಾಯಗಳ ನಡುವೆ ನಾನು ಸಿಕ್ಕಿಬಿದ್ದಿದ್ದೇನೆ. ಏನು ಮಾಡುವುದು ಎಂದು ತೋಚದೆ ತೊಳಲಾಡುತ್ತಿದ್ದೇನೆ. ನೀನು ನನಗೆ ಗುರುವೂ ಹೌದು, ತಂದೆಯೂ ಹೌದು. ದಯವಿಟ್ಟು ನನಗೆ ಬೋಧಿಸು.''

ಆಗ ಅಗ್ನಿವೇಷ್ಯನು ಮಗನಿಗೆ ಹೀಗೆ ಬೋಧಿಸುತ್ತಾನೆ: ಮಗು, ಕೇಳು. ಪ್ರಾಚೀನವಾದ ಒಂದು ಪಾಠವನ್ನು ನಿನಗೆ ತಿಳಿಸಿ ಕೊಡುತ್ತೇನೆ. ಇದನ್ನು ನೀತಿಯೆಂದು ಪರಿಗಣಿಸಿ, ಆಮೇಲೆ ನಿನಗೆ ಯಾವುದು ಇಷ್ಟವೋ ಅದನ್ನು ಮಾಡು. ಒಮ್ಮೆ ಸುರುಚಿ ಎಂಬ ಗಂಧರ್ವಕನ್ಯೆಯು ಹಿಮಾಲಯದ ಶಿಖರವೊಂದರ ಮೇಲೆ ಕುಳಿತಿದ್ದಳು. ಆಗ ಇಂದ್ರದೂತನೊಬ್ಬನು ಆಕಾಶಮಾರ್ಗದಲ್ಲಿ ಸಾಗಿ ಹೋಗುತ್ತಿರುವುದನ್ನು ಕಂಡಳು. ಉದ್ದೇಶವೇನು ಎಂದು ಕೇಳಿದಳು. ಅದಕ್ಕೆ ಆ ದೂತನು ತಾನು ಪಯಣಿಸುತ್ತಿರುವ ಉದ್ದೇಶವನ್ನು ಕುರಿತು ಹೀಗೆ ಹೇಳಿದನು: ''ಅರಿಷ್ಟನೇಮಿ ಎಂಬ ರಾಜರ್ಷಿ ರಾಜ್ಯವನ್ನು ತನ್ನ ಮಗನಿಗೆ ವಹಿಸಿಕೊಟ್ಟು, ಗಂಧಮಾಧನ ಪರ್ವತದಲ್ಲಿ ಘನಘೋರ ತಪಸ್ಸಿನಲ್ಲಿ ತೊಡಗಿದ್ದಾನೆ. ಇದನ್ನು ಕಂಡ ಇಂದ್ರನು, ಗಂಧರ್ವ ಕನ್ಯೆಯರನ್ನು ಕರೆದುಕೊಂಡು ಅವನಲ್ಲಿಗೆ ಹೋಗಿ, ಆ ರಾಜರ್ಷಿಯನ್ನು ಸ್ವರ್ಗಕ್ಕೆ ಕರೆದುಕೊಂಡು ಬರುವಂತೆ ಆದೇಶವಿತ್ತನು. ಆದರೆ ಆ ಅರಿಷ್ಟನೇಮಿಯು ಸ್ವರ್ಗಕ್ಕೆ ಹೋಗುವುದರ ಶುಭಾಶುಭಗಳ ಬಗ್ಗೆ ತಿಳಿದುಕೊಳ್ಳಲು ಬಯಸುತ್ತಿದ್ದಾನೆ. ಅದಕ್ಕೆ ಅವನಿಗೆ ನಾನು ಹೀಗೆ ಹೇಳಿದೆ – 'ಸ್ವರ್ಗವೆಂದರೆ ಜೀವಿಗಳು ತಮ್ಮ ಪುಣ್ಯಸಂಚಯಕ್ಕೆ ಅನುಗುಣವಾಗಿ ಫಲವನ್ನು ಅನುಭವಿಸುವ ಸ್ಥಳ. ಉತ್ತಮವರ್ಗದ, ಮಧ್ಯಮವರ್ಗದ ಮತ್ತು ಅಧಮವರ್ಗದ ಪುಣ್ಯಜೀವಿಗಳಾದ ಮಾನವರು ತಮ್ಮ ಕರ್ಮಗಳಿಗೆ ಅನುಸಾರವಾಗಿ ಭೋಗವನ್ನು ಪಡೆದುಕೊಳ್ಳುತ್ತಾರೆ. ತಮ್ಮ ತಮ್ಮ ಪುಣ್ಯಸಂಚಯವು ಮುಗಿದ ಒಡನೆಯೇ, ಅವರು ಮತ್ತೆ ಮರ್ತ್ಯಲೋಕಕ್ಕೆ ಹಿಂದಿರುಗಬೇಕಾಗುತ್ತದೆ.' ಇದನ್ನು ಕೇಳಿ ಆ ರಾಜರ್ಷಿಯು ಸ್ವರ್ಗಕ್ಕೆ ಆಗಮಿಸುವಂತೆ ಇಂದ್ರನು ನೀಡಿದ ಆಮಂತ್ರಣವನ್ನು ನಿರಾಕರಿಸಿಬಿಟ್ಟನು. ಸ್ವರ್ಗಕ್ಕೆ ಬರುವಂತೆ ತಾನು ನೀಡಿದ ಆಹ್ವಾನವನ್ನು ತಿರಸ್ಕರಿಸುವುದಕ್ಕೆ ಮುಂಚೆ, ಈ ಬಗ್ಗೆ ಮಹರ್ಷಿ ವಾಲ್ಮೀಕಿಗಳ ಸಲಹೆಯನ್ನು ಕೇಳುವಂತೆ ಪ್ರಾರ್ಥಿಸಲು ಇಂದ್ರನು ಮತ್ತೊಮ್ಮೆ ನನ್ನನ್ನು ಅವನೆಡೆಗೆ ಕಳುಹಿಸಿಕೊಟ್ಟನು. ಅನಂತರ ಅರಿಷ್ಟನೇಮಿಯು ವಾಲ್ಮೀಕಿಯನ್ನು ಭೇಟಿಯಾದನು.''

ಅರಿಷ್ಟನೇಮಿಯು ವಾಲ್ಮೀಕಿಯನ್ನು ಹೀಗೆ ಪ್ರಶ್ನಿಸಿದನು: ಜನ್ಮ ಮತ್ತು ಮರಣಗಳ ಸಂಕೋಲೆಯನ್ನು ಬಿಡಿಸಿಕೊಳ್ಳುವ ಉತ್ತಮ ಮಾರ್ಗ ಯಾವುದು? ಇದಕ್ಕೆ ಉತ್ತರವಾಗಿ, ವಾಲ್ಮೀಕಿಯು ಅವನಿಗೆ

ರಾಮ ಮತ್ತು ವಸಿಷ್ಠರ ನಡುವೆ ನಡೆದ ಸಂಭಾಷಣೆಯನ್ನು ವಿವರಿಸಲಾರಂಭಿಸಿದನು:

**ಕಥಾರಂಭ:** ಈ ಕಥೆಯನ್ನು ಕೇಳಲು ಅರ್ಹತೆ ಯಾರಿಗೆ ಇದೆ, ಗೊತ್ತೆ? ಯಾವನು, 'ನಾನು ಬಂಧನದಲ್ಲಿದ್ದೇನೆ, ನಾನು ಅದರಿಂದ ಬಿಡಿಸಿಕೊಳ್ಳಬೇಕು' ಎಂದು ಹಪಹಪಿಸುತ್ತಿರುತ್ತಾನೋ ಅವನೇ ಈ ಕಥೆಯನ್ನು ಕೇಳಲು ಅರ್ಹನು. ಅಂಥವರು ಪೂರ್ತಿ ಅಜ್ಞಾನಿಗಳೂ ಅಲ್ಲ, ಅಥವಾ ಪೂರ್ತಿ ಜ್ಞಾನಿಗಳೂ ಅಲ್ಲ. ಯೋಗವಾಸಿಷ್ಠವೆಂಬ ಈ ಪವಿತ್ರಗ್ರಂಥದಲ್ಲಿ ಕಥೆಗಳ ರೂಪದಲ್ಲಿ ಇರುವ ಮೋಕ್ಷ ಸಾಧಕವಾದ ವಿಚಾರಗಳನ್ನು ಯಾರು ಚೆನ್ನಾಗಿ ಮನನ ಮಾಡುತ್ತಾರೋ, ಅವರು ಖಂಡಿತವಾಗಿಯೂ ಜನ್ಮ-ಮೃತ್ಯುಗಳ ರೂಪದಲ್ಲಿ ಇರುವ ಸಂಸಾರದಿಂದ ಬಿಡುಗಡೆ ಹೊಂದುತ್ತಾರೆ.

ರಾಮನನ್ನು ಕುರಿತಾದ ಈ ಕಥೆಯನ್ನು ಮೊದಲು ನಾನು ನನ್ನ ಪ್ರಿಯಶಿಷ್ಯನಾದ ಭರದ್ವಾಜನಿಗೆ ಹೇಳಿದೆನು. ಒಮ್ಮೆ ಅವನು ಮೇರು ಪರ್ವತಕ್ಕೆ ಹೋಗಿದ್ದಾಗ, ಅಲ್ಲಿ ಸೃಷ್ಟಿಕರ್ತನಾದ ಬ್ರಹ್ಮನನ್ನು ಕಂಡು, ಅವನಿಗೆ ಈ ಕಥೆಯನ್ನು ಹೇಳಿದನು. ಇದರಿಂದ ಬಹಳ ಸಂತೋಷಗೊಂಡ ಬ್ರಹ್ಮನು ಭರದ್ವಾಜನಿಗೆ ಯಾವುದಾದರೂ ಒಂದು ವರವನ್ನು ಕೇಳಿಕೋ ಎಂದು ಹೇಳಿದನು. ''ಎಲ್ಲ ಮಾನವ ಜೀವಿಗಳೂ ದುಃಖದಿಂದ ಪಾರಾಗಲಿ'' ಎಂಬ ವರವನ್ನು ಭರದ್ವಾಜನು ಬ್ರಹ್ಮನಲ್ಲಿ ಕೇಳಿಕೊಂಡನು. ಅದನ್ನು ಸಾಧಿಸಲು ಬೇಕಾದ ಉತ್ತಮ ಮಾರ್ಗವನ್ನು ಹೇಳಿಕೊಡುವಂತೆ ಬೇಡಿಕೊಂಡನು.

ಅದಕ್ಕೆ ಬ್ರಹ್ಮನು ಹೀಗೆಂದನು: ''ಮಗೂ, ಭರದ್ವಾಜ. ನೀನು ಈಗಿಂದೀಗಲೇ ವಾಲ್ಮೀಕಿಯ ಬಳಿಗೆ ಹೋಗು. ರಾಮನ ಉದಾತ್ತ ಕಥನವನ್ನು ಎಲ್ಲರಿಗೂ ತಿಳಿಸು ಎಂದು ಅವನನ್ನು ಬೇಡಿಕೋ. ಇದರಿಂದ ಕೇಳುಗರು ಮಾಯೆಯ ಅಂಧಕಾರದಿಂದ ಪಾರಾಗಲಿ.''

ಇದಿಷ್ಟೇ ಅಲ್ಲ, ಬ್ರಹ್ಮನು ಭರದ್ವಾಜನನ್ನು ಕರೆದುಕೊಂಡು, ನನ್ನ ಕುಟೀರಕ್ಕೆ ಬಂದೇಬಿಟ್ಟನು. ನಾನು ಅವನಿಗೆ ಆದರ ಸತ್ಕಾರಗಳನ್ನು ಮಾಡಿದೆನು. ಅನಂತರ ಬ್ರಹ್ಮನು ನನಗೆ ಹೀಗೆಂದನು: ''ಓ ಮಹರ್ಷಿ, ನಿನ್ನ ಕಥೆ ಹೇಗಿದೆ ಗೊತ್ತೆ? ಜನರನ್ನು ದಾಟಲು ಉಪಯೋಗಿಸಬಹುದಾದ ನೌಕೆಯಂತೆ ಇದೆ. ಆದ್ದರಿಂದ ಈ ಕಥೆಯನ್ನು ದಯವಿಟ್ಟು ವಿಸ್ತಾರವಾಗಿ ರಚಿಸು.''

ಬ್ರಹ್ಮನ ಈ ದಿಢೀರ್ ಆಜ್ಞೆಯನ್ನು ಕೇಳಿ ನಾನು ಆಶ್ಚರ್ಯಗೊಂಡೆನು. ಈ ಮಾತಿನ ಅರ್ಥವೇನೆಂದು ಭರದ್ವಾಜನನ್ನು ಕೇಳಿದೆನು. ಬ್ರಹ್ಮನ ಮನಸ್ಸಿನಲ್ಲಿ ಇದ್ದ ಆಕಾಂಕ್ಷೆಯನ್ನು ಭರದ್ವಾಜನು ವಿವರಿಸಿ ಹೇಳಿದನು: ''ರಾಮನ ಕಥೆಯನ್ನು ನೀವು ಜನರಿಗೆ ತಿಳಿಸಿಕೊಡಬೇಕೆಂಬುದೇ ಬ್ರಹ್ಮನ ಇಚ್ಛೆಯಾಗಿದೆ. ಇದರಿಂದ ದುಃಖವನ್ನು ದಾಟಲು ಜನರಿಗೆ ಸಾಧ್ಯವಾಗಬೇಕು. ಆ ರೀತಿಯಲ್ಲಿ ಕಥೆಯನ್ನು ನೀವು ಬರೆಯಬೇಕು. ಓ ಮಹರ್ಷಿಯೇ, ನಾನೂ ನಿಮ್ಮನ್ನು ಕೇಳಿಕೊಳ್ಳುತ್ತಿದ್ದೇನೆ. ದಯವಿಟ್ಟು ರಾಮ, ಲಕ್ಷ್ಮಣ ಮತ್ತು ಇತರ ಸಹೋದರರು ದುಃಖದ ಬವಣೆಯಿಂದ ಹೇಗೆ ಪಾರಾದರು ಎನ್ನುವುದನ್ನು ದಯವಿಟ್ಟು ಉಪದೇಶಿಸಿರಿ.''

ಇದರಂತೆಯೇ ರಾಮ ಮತ್ತು ಅವನ ಸಹೋದರರು, ಅವರ ತಂದೆತಾಯಿಯರು, ರಾಜಸಭೆಯ ಗಣ್ಯರು ಹೇಗೆ ಮುಕ್ತಿಯನ್ನು ಹೊಂದಿದರು ಎಂಬುದನ್ನು ನಾನು ಭರದ್ವಾಜನಿಗೆ ಉಪದೇಶಿಸಿದೆನು. ಅನಂತರ ಭರದ್ವಾಜನಿಗೆ ಹೀಗೆ ಹೇಳಿದೆನು: ''ಮಗೂ, ನೀನೂ ಅವರಂತೆಯೇ ನಿನ್ನ ಜೀವನವನ್ನು ನಡೆಸಿದರೆ, ಈಗಲೇ ಇಲ್ಲೇ ಎಲ್ಲ ರೀತಿಯ ದುಃಖಗಳಿಂದಲೂ ಪಾರಾಗಬಹುದು.''

ವಾಲ್ಮೀಕಿ ತಮ್ಮ ಮಾತನ್ನು ಮುಂದುವರೆಸಿದರು:

''ಮಗೂ, ಭರದ್ವಾಜ. ಈ ಜಗತ್ತಿನ ಕಾಣ್ಕೆಯೆಂಬುದು ಬರೀ ಭ್ರಮೆ. ಆಕಾಶದ ಬಣ್ಣ ನೀಲಿ ಎಂದು ಕೆಲವರು ತಪ್ಪಾಗಿ ತಿಳಿಯುತ್ತಾರೆ. ನಿಜವಾಗಿ ನೋಡಿದರೆ, ಆಕಾಶಕ್ಕೆ ಯಾವ ಬಣ್ಣವೂ ಇಲ್ಲ. ಅದೇರೀತಿ ಇದೂ ಕೂಡ. ಆದ್ದರಿಂದ ಮನಸ್ಸನ್ನು ಜಗತ್ತಿನ ಮೇಲೆ ಇಡದಿರುವುದೇ ಒಳ್ಳೆಯದು. ಅದನ್ನು ಸಾರಾಸಗಟಾಗಿ ತಿರಸ್ಕರಿಸುವುದೇ ಶ್ರೇಯಸ್ಕರ. ಈ ಜಗತ್ತಿನ ನೋಟವು ಮಿಥ್ಯೆಯೆಂಬ ಸ್ಥಿರ ಬುದ್ಧಿ ಉಂಟಾಗುವವರೆಗೆ ನಾವು ದುಃಖದಿಂದ ಪಾರಾಗಲಾರೆವು. ಶಾಸ್ತ್ರಗಳನ್ನು ಶ್ರದ್ಧೆಯಿಂದ ಅಧ್ಯಯನ ಮಾಡುವುದರಿಂದ ಮಾತ್ರವೇ ಇಂಥ ಸ್ಥಿರಬುದ್ಧಿ ಉಂಟಾಗುತ್ತದೆ. ವಿಷಯ ವಸ್ತುಗಳಿಂದ ಕೂಡಿದ ಈ ಜಗತ್ತು ಸತ್ಯ ಮತ್ತು ಅಸತ್ಯಗಳ ಭ್ರಮಾತ್ಮಕ ಮಿಶ್ರಣ ಎಂಬ ದೃಢಬುದ್ಧಿ ಆಗಮಾತ್ರ ನಮಗೆ ಮೂಡುತ್ತದೆ. ಶಾಸ್ತ್ರಾಧ್ಯಯನವನ್ನು ಮಾಡದಿದ್ದರೆ ನಮ್ಮ ಬುದ್ಧಿ ಸ್ಥಿರವಾಗದು.

''ಭರದ್ವಾಜ, ಮೋಕ್ಷವೆಂದರೆ ಏನು ಗೊತ್ತೆ? ಮನಸ್ಸಿನಲ್ಲಿ ಮೂಡಿರುವ ಎಲ್ಲ ಬಗೆಯ ವಾಸನೆಗಳ ಸಂಪೂರ್ಣ ನಿರ್ಮೂಲನ; ಲವಲೇಶವೂ ಇಲ್ಲದ ಹಾಗೆ ಅವುಗಳನ್ನು ಮನಸ್ಸಿನಿಂದ ಸಂಪೂರ್ಣವಾಗಿ ಹೊರದೂಡುವುದು. ಮನಸ್ಸಿನ ವೃತ್ತಿಗಳಲ್ಲಿ ಎರಡು ವಿಧ: ಶುದ್ಧ ಮತ್ತು ಅಶುದ್ಧ. ಅಶುದ್ಧ ವೃತ್ತಿಯೇ ಜನ್ಮಾದಿಗಳಿಗೆ ಕಾರಣ. ಈ ಬಗೆಯ ವೃತ್ತಿಗಳು ಅವಿದ್ಯೆ ಮತ್ತು ಅಹಂಕಾರಗಳಿಂದ ಕೂಡಿದ್ದು, ಅವೇ ಸಂಸಾರವೃಕ್ಷಕ್ಕೆ ಬೀಜರೂಪಗಳಾಗುತ್ತವೆ. ಇವುಗಳನ್ನು ತ್ಯಜಿಸಿದಾಗ ದೇಹಧಾರಣೆಗೆ ಬೇಕಾದಷ್ಟು ಮಾತ್ರವೇ ಮಾನಸಿಕ ವೃತ್ತಿಗಳು ಉಳಿಯುತ್ತವೆ. ಅವು ಶುದ್ಧ ರೂಪದ್ದಾಗಿವೆ. ಜೀವನ್ಮುಕ್ತರಲ್ಲಿ ಇಂಥ ವೃತ್ತಿಗಳು ಇನ್ನೂ ಉಳಿದುಕೊಂಡಿರುತ್ತವೆ. ಆದರೆ ಅವು ಪುನರ್ಜನ್ಮಕ್ಕೆ ಕಾರಣವಾಗುವುದಿಲ್ಲ. ಅವು ಪ್ರಾರಬ್ಧವಶಾತ್ ಉಳಿದುಕೊಂಡಿರುತ್ತವೆಯೇ ಹೊರತು, ಜೀವನ್ಮುಕ್ತನು ಸದ್ಯ ಮಾಡುವ ಕಾರ್ಯಗಳಿಂದ ಉಂಟಾದ್ದಲ್ಲ.

''ಮಗೂ, ಭರದ್ವಾಜ. ಶ್ರೀರಾಮನು ಮುಕ್ತನಾದ ಮುನಿಯಂತೆ ಸಚ್ಚಾರಿತ್ರ್ಯದ ಜೀವನವನ್ನು ಹೇಗೆ ನಡೆಸಿದನು ಎಂಬುದನ್ನು ನಾನು ನಿನಗೆ ವಿವರಿಸಿ ಹೇಳುತ್ತೇನೆ. ಇದನ್ನು ಆಲಿಸುವುದರಿಂದ ಮುಪ್ಪು ಮತ್ತು ಮರಣಗಳ ಬಗ್ಗೆ ನಿನಗೆ ಇರುವ ಎಲ್ಲ ಬಗೆಯ ತಪ್ಪು ತಿಳಿವಳಿಕೆಯೂ ತೊಲಗುತ್ತದೆ.''

**ರಾಮನ ದುಃಖ:** ರಾಮನು ಹಲವಾರು ವರ್ಷಗಳ ಕಾಲ ಗುರುಕುಲದಲ್ಲಿ ವಾಸಮಾಡಿಕೊಂಡಿದ್ದನು. ಎಲ್ಲ ವಿದ್ಯೆಗಳನ್ನೂ ಕಲಿತುಕೊಂಡು ಅವನು ಅಯೋಧ್ಯೆಗೆ ತಿರುಗಿಬಂದನು. ಕೆಲವು ಕಾಲ ಆನಂದ

ದಿಂದ ಅಲ್ಲಿಯೇ ಕಳೆದನು. ಅನಂತರ ಅವನಿಗೆ ತೀರ್ಥಯಾತ್ರೆ ಮಾಡಬೇಕೆಂಬ ಇಚ್ಛೆಯುಂಟಾಯಿತು. ತಂದೆಯ ಅನುಮತಿಯನ್ನು ಪಡೆದುಕೊಂಡು ತೀರ್ಥಯಾತ್ರೆಗೆ ಹೊರಟನು. ತನ್ನ ಸಹೋದರರೊಡನೆ ಇಡೀ ದೇಶವನ್ನು ಸುತ್ತಿಬಂದನು. ಅವನು ರಾಜಧಾನಿಗೆ ತಿರುಗಿಬಂದಾಗ ಜನರೆಲ್ಲರೂ ಸಂತೋಷಪಟ್ಟರು; ಉತ್ಸವವನ್ನು ಆಚರಿಸಿದರು.

ಕೆಲವು ಕಾಲ ರಾಮನು ತನ್ನ ದಿನನಿತ್ಯದ ಕಾರ್ಯಗಳನ್ನು ಮಾಡುತ್ತ ಕಾಲಕಳೆದನು. ಆದರೆ ಈಗ ಅವನ ಸ್ವಭಾವದಲ್ಲಿ ಗಮನಾರ್ಹ ಬದಲಾವಣೆ ಕಂಡುಬಂದಿತ್ತು. ದಿನದಿನಕ್ಕೆ ಅವನು ಬಡಕಲಾಗತೊಡಗಿದನು; ದುರ್ಬಲನಾದನು. ಅವನ ಮುಖವೂ ಕಳಾಹೀನವಾಗತೊಡಗಿತು. ಇದನ್ನು ಕಂಡು ತಂದೆ ದಶರಥನಿಗೆ ಅಚ್ಚರಿಯ ಜೊತೆಗೆ ಆತಂಕವೂ ಉಂಟಾಯಿತು. ಅವನು ಮಗನನ್ನು ಕರೆದು ವಿಚಾರಿಸಿದನು. ರಾಮನು, ''ಅಪ್ಪಾ, ನನಗೆ ಏನೂ ಆಗಿಲ್ಲ'' ಎಂದಷ್ಟೇ ಉತ್ತರಕೊಟ್ಟನು. ಇದರಿಂದ ತೃಪ್ತನಾಗದ ದಶರಥನು ಗುರುಗಳಾದ ವಸಿಷ್ಠರ ಸಲಹೆ ಕೇಳಿದನು. ''ರಾಜ, ರಾಮನಲ್ಲಿ ಕಂಡುಬಂದಿರುವ ಈ ಪರಿವರ್ತನೆಗೆ ಏನೋ ಒಂದು ಬಲವಾದ ಕಾರಣವೇ ಇರಬೇಕು. ಶ್ರೇಷ್ಠ ವ್ಯಕ್ತಿಗಳಲ್ಲಿ ಈ ರೀತಿಯ ವರ್ತನೆ ಕಂಡುಬಂದಿತೆಂದರೆ, ಅದರ ಹಿನ್ನೆಲೆಯಲ್ಲಿ ಒಂದು ಉದಾತ್ತ ಕಾರಣವೇ ಇರುತ್ತದೆ'' ಎಂದರು.

ಇದಾಗಿ ಕೆಲವು ದಿವಸಗಳಲ್ಲಿಯೇ ಋಷಿ ವಿಶ್ವಾಮಿತ್ರರು ಅರಮನೆಗೆ ಬಂದರು. ತಾವು ನೆರವೇರಿಸಲು ಹೊರಟಿರುವ ಯಜ್ಞವನ್ನು ರಾಕ್ಷಸರಿಂದ ರಕ್ಷಿಸಲು ರಾಮನನ್ನು ಕಳಿಸಿಕೊಡು ಎಂದರು. ಇದನ್ನು ಕೇಳಿ ದಶರಥನಿಗೆ ದಿಗ್ಭ್ರಮೆಯಾಯಿತು. ''ಇಷ್ಟು ಸಣ್ಣ ವಯಸ್ಸಿನವನನ್ನು ಹೇಗೆ ತಾನೇ ಕಳಿಸಲಿ? ನಿಮ್ಮ ಯಜ್ಞರಕ್ಷಣೆಗಾಗಿ ನಾನೇ ಬರುತ್ತೇನೆ'' ಎಂದನು. ಇದನ್ನು ಕೇಳಿ ವಿಶ್ವಾಮಿತ್ರರು ಕೋಪಗೊಂಡರು. ಆಗ ಗುರುಗಳಾದ ವಸಿಷ್ಠರು ರಾಮನನ್ನು ಸಭೆಗೆ ಕರೆಸುವಂತೆ ಹೇಳಿದರು. ಅದರಂತೆ ರಾಜನು ರಾಮನಿಗೆ ಹೇಳಿಕಳಿಸಿದನು. ''ರಾಜಕುಮಾರನು ಬಹಳ ಖಿನ್ನನಾಗಿದ್ದಾನೆ, ಅವನಿಗೆ ಜನರ ಸಂಪರ್ಕವೇ ಬೇಡವಾಗಿದೆ'' ಎಂದು ಹೋಗಿ ಕರೆದ ಸೇವಕನು ಉತ್ತರಿಸಿದನು. ಆಗ ರಾಜನು ರಾಮನ ಈ ಮನಃಸ್ಥಿತಿಗೆ ಕಾರಣವೇನೆಂದು ಆತನ ಆಪ್ತ ಸಹಾಯಕನನ್ನು ವಿಚಾರಿಸಿದನು. ಆಗ ಅವನು ಹೀಗೆ ಹೇಳಿದನು: ''ಪ್ರಭೂ, ತೀರ್ಥಯಾತ್ರೆಯಿಂದ ಹಿಂದಿರುಗಿ ಬಂದಮೇಲೆ ಯುವರಾಜರಲ್ಲಿ ಮಹಾನ್ ಪರಿವರ್ತನೆ ಉಂಟಾಗಿಬಿಟ್ಟಿದೆ. ಅವರಿಗೆ ಯಾವುದರಲ್ಲಿಯೂ ಆಸಕ್ತಿಯಿಲ್ಲ. ಆಭರಣಗಳು, ಮುತ್ತುರತ್ನಗಳು, ನರ್ತಕಿಯರು ಯಾವುದೂ ಅವರಿಗೆ ಹಿಡಿಸುತ್ತಿಲ್ಲ. ಅವುಗಳನ್ನು ಅವರು ದ್ವೇಷಿಸುತ್ತಾರೆ. ಅವರ ಕಣ್ಣುಗಳು ವಿಷಾದ ಭಾವನೆಯಿಂದ ಕೂಡಿವೆ. ದಿನನಿತ್ಯದ ಕರ್ತವ್ಯಗಳನ್ನು ಯಂತ್ರದಂತೆ ಮಾಡುತ್ತಾರೆ, ಅಷ್ಟೇ. 'ಇವುಗಳಿಂದ ಏನುತಾನೇ ಪ್ರಯೋಜನ?' ಎಂದು ಒಮ್ಮೊಮ್ಮೆ ತಮಗೆ ತಾವೇ ಮಾತನಾಡಿಕೊಳ್ಳುತ್ತಾರೆ. ಅವರಿಗೆ ಏನಾಯಿತು ಎಂದು ನಮಗೂ ತಿಳಿಯದಾಗಿದೆ, ಪ್ರಭೂ.''

ಮುಂದುವರೆದು ಆಪ್ತ ಸಹಾಯಕನು ಹೇಳಿದನು: ''ಸ್ವಾಮಿ, ಯುವರಾಜರು ಮತ್ತೆ ಮತ್ತೆ ತಮ್ಮಲ್ಲೇ ಹೀಗೆ ಹೇಳಿಕೊಳ್ಳುತ್ತಿರುತ್ತಾರೆ: 'ಅಯ್ಯೋ, ನಾವು ನಮ್ಮ ಜೀವನವನ್ನು ವ್ಯರ್ಥವಾದ ರೀತಿಯಲ್ಲಿ ಕಳೆಯುತ್ತಿದ್ದೇವೆ. ಪರತತ್ತ್ವವನ್ನು ತಲುಪಲು ಯಾವ ಪ್ರಯತ್ನವನ್ನೂ ಮಾಡುತ್ತಲೇ ಇಲ್ಲ. ಜನರು ತಾವು ದುಃಖಪಡುತ್ತಿದ್ದೇವೆಂದು ಗೋಳಾಡುತ್ತಿರುತ್ತಾರೆ. ಆದರೆ ಯಾರೂ ಕೂಡ ದುಃಖವನ್ನು ತರುವ ವಸ್ತುಗಳಿಂದ ವಿಮುಖರಾಗುತ್ತಲೇ ಇಲ್ಲ!' ಇದನ್ನು ಕೇಳಿ ನಾವೇನು ಮಾಡುವುದು ಎಂದು ಗೊತ್ತೇ ಆಗುತ್ತಿಲ್ಲ, ಪ್ರಭೂ.''

ಆಗ ಅಲ್ಲಿ ಕುಳಿತಿದ್ದ ವಿಶ್ವಾಮಿತ್ರನು ಹೀಗೆ ಹೇಳಿದನು: ಹಾಗಾದರೆ, ರಾಮನನ್ನು ಇಲ್ಲಿಗೆ ಕರೆಸಿರಿ. ಅವನ ಮನಃಸ್ಥಿತಿ ವ್ಯಾಮೋಹದಿಂದ ಕೂಡಿದ್ದಲ್ಲ; ಅದಕ್ಕೆ ಬದಲಾಗಿ ಜ್ಞಾನ ಮತ್ತು ವೈರಾಗ್ಯಗಳಿಂದ ತುಂಬಿಕೊಂಡದ್ದು. ಅವನಿಗೆ ಜ್ಞಾನೋದಯವಾಗುತ್ತದೆ ಎನ್ನುವುದಕ್ಕೆ ಇವು ಲಕ್ಷಣಗಳು. ಅವನ ಖಿನ್ನತೆಯನ್ನು ನಾವು ದೂರಮಾಡುತ್ತೇವೆ. ರಾಜ, ಅವನನ್ನು ಇಲ್ಲಿಗೆ ಕರೆಸು.''

ವಾಲ್ಮೀಕಿ ಕಥೆಯನ್ನು ಮುಂದುವರೆಸುತ್ತಾರೆ:

ರಾಮನನ್ನು ಕರೆತರುವಂತೆ ರಾಜನು ರಾಮನ ಆಪ್ತಸಹಾಯಕನಿಗೆ ಆಜ್ಞೆ ಮಾಡಿದನು. ಅಷ್ಟರಲ್ಲಿ ರಾಮನೇ ರಾಜಸಭೆಯನ್ನು ಪ್ರವೇಶಿಸಿದನು. ದೂರದಿಂದಲೇ ತಂದೆಗೂ, ನೆರೆದಿದ್ದ ಋಷಿಗಳಿಗೂ ನಮಸ್ಕರಿಸಿದನು. ''ಮಗೂ, ಇಷ್ಟೇಕೆ ಖಿನ್ನನಾಗಿದ್ದೀಯಪ್ಪಾ?'' ಎಂದು ಮಗನನ್ನು ಅಪ್ಪಿಕೊಂಡ ದಶರಥನು ವಿಚಾರಿಸಿದನು. ಅವನ ಮಾತಿಗೆ ವಸಿಷ್ಠ ವಿಶ್ವಾಮಿತ್ರರೇ ಮೊದಲಾದ ಋಷಿಗಳೆಲ್ಲರೂ ದನಿಗೂಡಿಸಿದರು.

ರಾಮನು ಅವರ ಕಳಕಳಿಯ ಮಾತಿಗೆ ಹೀಗೆ ಉತ್ತರಿಸಿದನು: ''ಪೂಜ್ಯರೇ, ನಿಮ್ಮ ಪ್ರಶ್ನೆಗೆ ನಾನು ಉತ್ತರಿಸುವೆನು. ಇತ್ತೀಚೆಗೆ ನಾನು ತೀರ್ಥಯಾತ್ರೆಗೆ ಹೋಗಿದ್ದೆನು. ಆ ಸಮಯದಲ್ಲಿ ಒಂದು ಬಗೆಯ ವಿಚಾರಸರಣಿಯು ನನ್ನ ಮನಸ್ಸನ್ನು ಆಕ್ರಮಿಸಿತು. ಈ ಜಗತ್ತಿನ ಮೇಲೆ ನನಗಿದ್ದ ಆಸೆಯನ್ನೆಲ್ಲ ಅದು ಸೂರೆಗೊಂಡಿತು. ನನ್ನ ಹೃದಯ ಈ ರೀತಿ ಪ್ರಶ್ನಿಸಲು ಆರಂಭಿಸಿತು: 'ಈ ಲೋಕದ ಜನರು ಸುಖ ಎನ್ನುವುದು ಯಾವುದನ್ನು? ಸುಖವು ಈ ಜಗತ್ತಿನ ಪರಿವರ್ತನಶೀಲ ವಸ್ತುಗಳಿಂದ ದೊರಕಲು ಸಾಧ್ಯವೇ? ಹುಟ್ಟುವ ಜೀವಿಗಳೆಲ್ಲ ಸಾಯುತ್ತವೆ. ಸಾಯುವುದು ಏತಕ್ಕಾಗಿ? ಮತ್ತೆ ಹುಟ್ಟಿ ಬರುವುದಕ್ಕಾಗಿ! ಈ ಕ್ಷಣಿಕ ಜೀವನದಲ್ಲಿ ಯಾವ ಅರ್ಥವನ್ನೂ ನಾನು ಕಾಣೆನು. ಜೀವನವೆಂಬುದು ದುಃಖ ಮತ್ತು ಪಾಪಗಳ ಮೂಲವಲ್ಲದೆ ಬೇರಲ್ಲ. ಸಂಬಂಧವಿಲ್ಲದ ಜೀವಿಗಳು ಒಂದು ಕಡೆ ಕೂಡುವವು; ಮನಸ್ಸು ಇತರ ಜೀವಿಗಳ ಜೊತೆಗೆ ಸಂಬಂಧವನ್ನು ಬೆಳೆಸುವುದು. ಹೀಗಾಗಿ ಈ ಜಗತ್ತಿನ ಎಲ್ಲ ವ್ಯವಹಾರವೂ ಮನಸ್ಸಿನ ಮೇಲೆಯೇ, ಒಬ್ಬನ ಮಾನಸಿಕ ಭಾವನೆಯ ಮೇಲೆಯೇ ನಿಂತಿದೆ ಯಲ್ಲವೆ?! ಹಾಗೆ ನೋಡಿದರೆ, ಮನಸ್ಸೇ ಒಂದು ಮಿಥ್ಯಾಕಲ್ಪನೆ. ಇದು ಹೇಗಿದೆ ಗೊತ್ತೇನು? ಒಬ್ಬ ತನ್ನ ಬಾಯಾರಿಕೆಯನ್ನು ಇಂಗಿಸಿಕೊಳ್ಳಲು ಮರೀಚಿಕೆಯ ಬೆಂಬತ್ತಿ ಹೋದಂತಿದೆ.

‘‘ಪೂಜ್ಯರೇ, ಜೀವಿಗಳಾದ ನಾವು ಖಂಡಿತವಾಗಿಯೂ ಯಾವುದೋ ಒಬ್ಬ ಯಜಮಾನನಿಗೆ ದಾಸರಲ್ಲ. ಆದರೂ ದಾಸರಂತೆ ಜೀವಿಸುತ್ತಿದ್ದೇವೆ. ಈ ಜಗತ್ತೆಂಬ ದಟ್ಟವಾದ ಅರಣ್ಯದಲ್ಲಿ ನಾವೆಲ್ಲ ದಿಕ್ಕುದಿಸೆಯಿಲ್ಲದೆ ಅಲೆದಾಡುತ್ತಿದ್ದೇವೆ. ಈ ಜಗತ್ತು ಎನ್ನುವುದಾದರೂ ಏನು? ಹುಟ್ಟುವುದು, ಬೆಳೆಯುವುದು ಮತ್ತು ಸಾಯುವುದು ಇವೆಲ್ಲ ಯಾವುದಕ್ಕೆ ಆಗುತ್ತಿವೆ? ಈ ಸಂಕಟವು ಕೊನೆಗೊಳ್ಳುವುದಾದರೂ ಯಾವಾಗ? ಈ ಎಲ್ಲ ಪ್ರಶ್ನೆಗಳಿಂದ ತಲ್ಲಣಗೊಂಡ ನನ್ನ ಹೃದಯ ದುಃಖದಿಂದ ಬೇಯುತ್ತಿದೆ. ಆದರೂ, ನಿಮಗೆಲ್ಲ ನೋವಾಗುತ್ತದೆಂದು ಬಹಳ ಕಷ್ಟಪಟ್ಟು ಕಣ್ಣೀರನ್ನು ತಡೆದುಕೊಂಡಿದ್ದೇನೆ.’’

ರಾಮನು ಮುಂದುವರೆಸಿದನು: ‘‘ಪೂಜ್ಯರೇ, ಒಬ್ಬ ಮನುಷ್ಯನನ್ನು ಅಜ್ಞಾನಿಯನ್ನಾಗಿಯೂ, ಅಸ್ಥಿರನನ್ನಾಗಿಯೂ ಹಾಗೆಯೇ ಆಶೆಬರುಕನನ್ನಾಗಿಯೂ ಮಾಡುವ ಧನಸಂಪತ್ತುಗಳು ನಿಜಕ್ಕೂ ವ್ಯರ್ಥವಾದುವೇ ಸರಿ. ಇದರಿಂದ ಸಾವಿರಾರು ಚಿಂತೆಗಳು ಮನಸ್ಸಿಗೆ ಕವಿದುಕೊಳ್ಳುತ್ತವೆ. ಮತ್ತೂ ಮತ್ತೂ ಬೇಕೆಂಬ ತವಕ ಉಂಟಾಗುತ್ತದೆ. ಧನವಂತನು ಯಾರಿಗೂ ಗೌರವವನ್ನು ಕೊಡುವುದಿಲ್ಲ. ಒಳ್ಳೆಯವರು, ಕೆಟ್ಟವರು ಇಬ್ಬರೂ ಧನಪತಿಗಳಾಗಬಹುದು. ಆದರೆ ಅವರ ಒಳ್ಳೆಯತನ, ಅನುಕಂಪ ಮತ್ತು ಸ್ನೇಹ ಎಲ್ಲಿಯವರೆಗೆ ಇರುತ್ತದೆ ಎಂದರೆ, ಧನಾಕಾಂಕ್ಷೆಯಿಂದ ಅವರ ಹೃದಯ ಕಲ್ಲಾಗುವವರೆಗೆ ಮಾತ್ರ. ಧನಾಭಿಲಾಷೆ ಎನ್ನುವುದು ಬುದ್ಧಿವಂತ ಪಂಡಿತ, ಧೀರ ಮತ್ತು ಕೃತಜ್ಞಪುರುಷ, ವಿನಯವಂತ ಮತ್ತು ಮೃದುಭಾಷಿ ಎಲ್ಲರನ್ನೂ ಕೆಡಿಸಿಬಿಡುತ್ತದೆ.

‘‘ಹಾಗೆಯೇ ಈ ಜೀವಿತಾವಧಿಯೆಂಬುದು ಕೂಡ. ಇದರ ಕಾಲಾವಧಿ ಎಲೆಯ ಮೇಲೆ ಇರುವ ನೀರಿನ ಗುಳ್ಳೆಯಷ್ಟು ಅಲ್ಪ, ಕ್ಷಣಿಕ. ಯಾರು ಆತ್ಮಜ್ಞಾನವನ್ನು ಹೊಂದುತ್ತಾರೋ, ಅವರಿಗೆ ಮಾತ್ರ ಈ ಜೀವನಕಾಲವು ಸಾರ್ಥಕವಾಗುತ್ತದೆ. ನಾವೆಷ್ಟೇ ಪ್ರಯತ್ನಪಟ್ಟರೂ ನಮ್ಮ ಆಯುಸ್ಸು ಇಷ್ಟೇ ಎಂಬ ವಿಶ್ವಾಸವನ್ನು ತಳೆಯಲು ಸಾಧ್ಯವೇ ಇಲ್ಲ. ಮನುಷ್ಯ ಅನವಶ್ಯಕವಾಗಿ ತನ್ನ ಜೀವಿತಕಾಲವನ್ನು ಹೆಚ್ಚಿಸಿಕೊಳ್ಳಲು ಹೆಣಗಾಡುತ್ತಾನೆ. ಇದರಿಂದ ದುಃಖದ ತೀವ್ರತೆಯನ್ನು ಹೆಚ್ಚಿಸಿಕೊಳ್ಳುವುದಲ್ಲದೆ, ಆ ಸಂಕಟದ ಅವಧಿಯನ್ನೂ ಅಧಿಕಗೊಳಿಸಿಕೊಳ್ಳುತ್ತಾನೆ. ಯಾರು ಆತ್ಮಜ್ಞಾನವನ್ನು ಪಡೆದುಕೊಳ್ಳಲು ಪ್ರಯತ್ನಪಡುತ್ತಾನೆಯೋ, ಅವನು ಮಾತ್ರ ನಿಜವಾಗಿ ಸಾರ್ಥಕ ಬಾಳುವೆಯನ್ನು ಬಾಳುತ್ತಾನೆ. ಆ ಮೂಲಕ ಅವನು ಮುಂದೆ ಬರಬಹುದಾದ ಜನ್ಮಗಳಿಗೆ ಇತಿಶ್ರೀ ಹಾಡುತ್ತಾನೆ. ಉಳಿದವರದು ಕತ್ತೆಯ ಬಾಳು. ಅಜ್ಞಾನಿಗೆ ಶಾಸ್ತ್ರಜ್ಞಾನವೆಂಬುದು ಬರೀ ಹೊರೆ. ಆಸೆಗಳಿಂದ ತುಂಬಿದವನಿಗೆ ಜ್ಞಾನವೇ ಭಾರ. ಚಂಚಲಚಿತ್ತನಿಗೆ ಅವನ ಮನಸ್ಸೇ ದೊಡ್ಡ ಹೊರೆ. ಆತ್ಮಜ್ಞಾನರಹಿತನಿಗೆ ದೇಹವೇ ದೊಡ್ಡ ಭಾರ.

‘‘ಪೂಜ್ಯರೇ, ಅಜ್ಞಾನದ ವೈರಿಯಾದ ಅಹಂಕಾರದ ಬಗ್ಗೆ ಯೋಚಿಸಿದಾಗಲೆಲ್ಲ ನನ್ನ ಮನಸ್ಸು ಭಯದಿಂದ ತತ್ತರಿಸುತ್ತದೆ. ಅಹಂಕಾರರಹಿತನಿಗೆ ಮಾತ್ರವೇ ನಿಜವಾದ ಸುಖ ಲಭ್ಯ. ಆಸೆಗಳನ್ನು ಹುಟ್ಟುಹಾಕುವುದು ಈ ಅಹಂಕಾರವೇ. ನನ್ನ ಮನಸ್ಸಿನ ವಿಚಾರದಲ್ಲಿ ನಾನು ಬಹಳ ಅಸಮಾಧಾನಗೊಂಡಿದ್ದೇನೆ. ಏಕೆಂದರೆ ದಿನದಿಂದ ದಿನಕ್ಕೆ ಅದು ಚಂಚಲವಾಗುತ್ತ ಸಾಗಿದೆ. ಹರಿದಾಡುವ ಈ ಮನಸ್ಸು ನನ್ನ ಅಂತರಾತ್ಮವನ್ನೇ ಹಾಳುಮಾಡಿಬಿಟ್ಟಿದೆ. ನೆಮ್ಮದಿಯಿಂದ ಇರಲು ಅದು ಬಿಡುತ್ತಲೇ ಇಲ್ಲ. ಮನಸ್ಸು ಇರುವುದರಿಂದ ಮೂರು ಲೋಕಗಳೂ ಅಸ್ತಿತ್ವದಲ್ಲಿ ಇವೆ; ವಿಷಯವಸ್ತುಗಳಿರುವುದೂ ಮನಸ್ಸಿನ ದೆಸೆಯಿಂದಲೇ. ಎಲ್ಲ ಬಗೆಯ ಅನರ್ಥಕ್ಕೆ ಮನಸ್ಸೇ ಕಾರಣ. ಅದೇ ಎಲ್ಲ ಪಾಪಗಳಿಗೂ, ಲೋಪದೋಷಗಳಿಗೂ ಆಶ್ರಯ.

‘‘ಪೂಜ್ಯರೇ, ಒಟ್ಟಾರೆಯಾಗಿ ಈ ಜಗತ್ತು ದುಃಖದಿಂದ ಕೂಡಿದ್ದು. ದ್ವಂದ್ವಗಳಿಗೆ ಅಂಟಿಕೊಳ್ಳದೆ ಇಂಥ ಜಗತ್ತಿನಲ್ಲಿ ಬಾಳುವುದಾದರೂ ಹೇಗೆ? ದುಃಖ ಮತ್ತು ದುಮ್ಮಾನಗಳಿಂದ ವಿಚಲಿತನಾಗದೆ ಈ ಜಗತ್ತಿನಲ್ಲಿ ಜೀವಿಸುವ ರಹಸ್ಯವನ್ನು ದಯವಿಟ್ಟು ನನಗೆ ಉಪದೇಶಿಸಿ. ಎಲ್ಲ ಕಡೆ ಪಸರಿಸುವ ಮನಸ್ಸನ್ನು ನಿಗ್ರಹಿಸುವ ವಿಧಾನವನ್ನು ನನಗೆ ಅನುಗ್ರಹಿಸಿ. ಪೂಜ್ಯರೇ, ನೀವು ಜ್ಞಾನಸಿದ್ಧರು. ಚಂಚಲವಾದ ನನ್ನ ಮನಸ್ಸು ಪರ್ವತದಂತೆ ಅಚಲವಾಗುವಂತೆ ಮಾಡುವ ಜ್ಞಾನವನ್ನು ನನಗೆ ದಯವಿಟ್ಟು ಹೇಳಿಕೊಡಿ. ಪೂಜ್ಯರೇ, ಮೋಹದಿಂದ ಮುಕ್ತರಾದ ಧೀರರ ಬಗೆ ಏನು? ಮುಕ್ತರಾಗಲು ಅವರು ಅಳವಡಿಸಿಕೊಂಡ ವಿಧಾನಗಳಾದರೂ ಯಾವುವು? ಈ ಎಲ್ಲ ವಿಷಯಗಳನ್ನು ಅರಿತುಕೊಳ್ಳಲು ಸಮರ್ಥನೆಂದು ನೀವು ನನ್ನನ್ನು ಪರಿಗಣಿಸುವುದಾದರೆ, ದಯವಿಟ್ಟು ದೊಡ್ಡ ಮನಸ್ಸು ಮಾಡಿ ನನಗೆ ಅವನ್ನು ಉಪದೇಶಿಸಿ. ಈ ವಿದ್ಯೆಯನ್ನು ಅರಿತು ಕೊಳ್ಳಲು ನಾನು ಅರ್ಹನಲ್ಲವೆಂದು ನಿಮಗೆ ತೋರಿದರೆ, ನನಗೆ ಬೇರೆ ಗತಿಯೇ ಇಲ್ಲ. ನಾನು ಸಾಯುವವರೆಗೂ ಉಪವಾಸ ಮಾಡಿ ಈ ದೇಹವನ್ನು ತ್ಯಜಿಸುತ್ತೇನೆ.’’

ಹೀಗೆ ಹೇಳಿ ರಾಮನು ಮೌನವಾದನು. ರಾಮನ ಮಾತುಗಳನ್ನು ಕೇಳಿದ ಸಭಿಕರೆಲ್ಲರೂ ಸ್ತಂಭೀಭೂತರಾದರು. ತಮ್ಮ ಮನಸ್ಸಿನ ಕೊಳೆಗಳೆಲ್ಲ ತೊಳೆದುಹೋದಂತೆ ಅವರಿಗೆ ಭಾಸವಾಯಿತು. ಅಮೃತಪ್ರಾಯವಾದ ರಾಮನ ಮಾತುಗಳನ್ನು ಕೇಳಿ ಅವರು ಪರಮಾನಂದಭರಿತರಾದರು. ಅವರೆಲ್ಲ ಮುಕ್ತಕಂಠದಿಂದ ರಾಮನ ಪರಿಪಕ್ವಜ್ಞಾನ ಮತ್ತು ವೈರಾಗ್ಯಪೂರಿತ ಮಾತುಗಳನ್ನು ಕೊಂಡಾಡಿದರು. ತದನಂತರ, ಸಭೆಯಲ್ಲಿ ನೆರೆದಿದ್ದ ಋಷಿಗಳು ಹೀಗೆ ಹೇಳಿದರು: ರಾಮನ ಗುರುತರವಾದ ಪ್ರಶ್ನೆಗಳಿಗೆ ಪೂಜ ರಾದ ವಸಿಷ್ಠರು ಉತ್ತರಿಸುವರು. ಋಷಿಗಳೇ, ಬನ್ನಿ ಬನ್ನಿ. ನಾವೆಲ್ಲ ಅದನ್ನು ಆಲಿಸಿ ಧನ್ಯರಾಗೋಣ. ಈ ವಾರ್ತೆ ಎಲ್ಲ ಕಡೆ ಹಬ್ಬಿತು. ಎಲ್ಲ ಕಡೆಗಳಿಂದ ಋಷಿಗಳು ದಶರಥನ ಆಸ್ಥಾನಕ್ಕೆ ಧಾವಿಸಿದರು. ತಮ್ಮ ತಮ್ಮ ಸ್ಥಾನಗಳಲ್ಲಿ ವಿರಾಜಮಾನರಾದರು.

ನಮ್ಮ ಮನಸ್ಸುಗಳು ಕೂಡ ರಾಮನ ಉನ್ನತ ಜ್ಞಾನೋದಯವನ್ನು ಕುರಿತು ಮನನ ಮಾಡಲಿ! ಹಾಗೆ ಮಾಡದಿದ್ದರೆ ನಾವು ನಿಜಕ್ಕೂ ಅಮೂಲ್ಯವಾದದ್ದನ್ನು ಕಳೆದುಕೊಳ್ಳುತ್ತೇವೆ; ಬುದ್ಧಿಹೀನರಾಗುತ್ತೇವೆ. ಬನ್ನಿ, ವಸಿಷ್ಠರು ರಾಮನಿಗೆ ಮಾಡಿದ ಅಮೃತೋಪದೇಶವನ್ನು ನಾವೂ ಸವಿಯೋಣ. 

# ಗಣೇಶನನ್ನು ಪೂಜಿಸಿದ ಗರಿಕೆಯ ಮಹತ್ವ

**ಕಥೆ: ರೇವತಿ** **ಚಿತ್ರ : ಶಂಕರ್**

**1** ಒಂದು ದಿನ ಋಷಿ ಕೌಂಡಿನ್ಯರು ಭಗವಾನ್ ಗಣೇಶನನ್ನು ಪೂಜಿಸುತ್ತಿದ್ದರು. ಅವರ ಪತ್ನಿಯೂ ಜೊತೆಗಿದ್ದಳು.




**2** ಋಷಿಗಳಿಗೆ ಪತ್ನಿಯ ಮನದ ಇಂಗಿತ ಅರ್ಥವಾಯಿತು. ಅವರು ಪೂಜೆ ಮುಗಿಸಿ, ಗಣೇಶನನ್ನು ಪೂಜಿಸಿದ ಗರಿಕೆಯನ್ನು ಅವಳಿಗೆ ನೀಡಿದರು.




**3** ಇಂದ್ರನು ಋಷಿಪತ್ನಿಯನ್ನು ದೇವಲೋಕಕ್ಕೆ ಸ್ವಾಗತಿಸಿದ. ಅವಳು ದೇವಲೋಕಕ್ಕೆ ಬಂದ ಕಾರಣ ತಿಳಿದಾಗ ಇಂದ್ರ ಹೇಳಿದ –




**4** ಕುಬೇರ ಅವರಿಬ್ಬರನ್ನೂ ಸ್ವಾಗತಿಸಿದ. ಅವರು ಯಾವ ಕಾರಣಕ್ಕಾಗಿ ಬಂದಿದ್ದಾರೆ ಎಂಬುದನ್ನು ತಿಳಿದ ಕೂಡಲೇ ಕುಬೇರ ಹೆಮ್ಮೆಯಿಂದ ಬೀಗಿದ.



5

ತಕ್ಕಡಿಯ ಒಂದು ತಟ್ಟೆಯಲ್ಲಿ ಗರಿಕೆಯ ಹುಲ್ಲನ್ನು ಇಡಲಾಯಿತು. ಕುಬೇರ ಇನ್ನೊಂದು ತಟ್ಟೆಯ ಮೇಲೆ ಒಂದು ಚಿನ್ನದ ನಾಣ್ಯವನ್ನಿಟ್ಟ.



ಓ ಇಂದ್ರ , ದಯವಿಟ್ಟು ಗರಿಕೆ ಹುಲ್ಲನ್ನು ಆ ತಟ್ಟೆಯ ಮೇಲಿಡು. ನಾನು ಈ ತಟ್ಟೆಯ ಮೇಲೆ ಚಿನ್ನದ ನಾಣ್ಯವನ್ನು ಇಡುತ್ತೇನೆ.

6

ಇದೇನು? ಗರಿಕೆ ಹುಲ್ಲು ನನ್ನ ಚಿನ್ನದ ನಾಣ್ಯಕ್ಕಿಂತಲೂ ಭಾರವೆ? ಇರಲಿ, ನಾನು ಎರಡು ನಾಣ್ಯಗಳನ್ನು ಇಡುತ್ತೇನೆ.



ಅರೆ, ಆದರೂ ತಕ್ಕಡಿಯ ಮುಳ್ಳು ಗರಿಕೆ ಹುಲ್ಲಿನ ಕಡೆಗೇ ಇನ್ನೂ ಬಾಗಿದೆಯಲ್ಲ? ನಾನೀಗ ನೂರು ನಾಣ್ಯಗಳನ್ನು ಇಡುತ್ತೇನೆ. ಹೋಗಲಿ, ನಾನು ಇಡೀ ನಾಣ್ಯದ ಚೀಲವನ್ನೇ ಇಡುತ್ತೇನೆ!

7

ನವರತ್ನಗಳಿರುವ ಪೆಟ್ಟಿಗೆಯನ್ನೇ ತಂದು ತಕ್ಕಡಿಯ ಮೇಲೆ ಇಡಿ!




8

ಕುಬೇರ, ನವರತ್ನಗಳ ಪೆಟ್ಟಿಗೆ ತಕ್ಕಡಿಯ ಮುಳ್ಳನ್ನು ಒಂದಿಷ್ಟೂ ಅಲುಗಾಡಿಸಲಿಲ್ಲ, ನೋಡು!



ಈ ಗರಿಕೆ ಹುಲ್ಲು ಅದೆಷ್ಟು ತೂಕವಿದ್ದೀತೋ ನೋಡುತ್ತೇನೆ. ಇಡೀ ಬೊಕ್ಕಸವನ್ನೇ ತಂದು ತಕ್ಕಡಿಯ ಮೇಲಿಡಿ!


9
ಕುಬೇರನ ಪಟ್ಟಣದ ಇಡೀ ಖಜಾನೆಯೇ ಖಾಲಿಯಾಯಿತು. ದೇವಾ, ಗರಿಕೆ ಹುಲ್ಲಿನ ಕಡೆಯಿಂದ ತಕ್ಕಡಿಯ ಮುಳ್ಳು ಒಂದಿಷ್ಟೂ ಅಲುಗಾಡಲಿಲ್ಲ!
ನೀವೆಲ್ಲರೂ ನಿಮ್ಮ ಸಂಪತ್ತನ್ನೆಲ್ಲ ಇಲ್ಲಿಗೆ ತಂದು ಸುರಿಯಿರಿ. ಹೇಗಾದರೂ ಅದಕ್ಕೆ ಸರಿದೂಗುವಂತೆ ಮಾಡಬೇಕು.


10
ಇಷ್ಟಾದರೂ ತಕ್ಕಡಿಯ ಮುಳ್ಳು ಸ್ವಲ್ಪವೂ ಅಲುಗಾಡಲಿಲ್ಲವಲ್ಲ! ಆಗಲಿ, ನಾನು ಹಾಗೂ ನನ್ನ ಕುಟುಂಬ ತಕ್ಕಡಿಯ ಮೇಲೆ ಕುಳಿತುಕೊಳ್ಳುತ್ತೇವೆ.


11
ಕುಬೇರ, ನಾನೂ ಕುಳಿತುಕೊಳ್ಳುತ್ತೇನೆ.
ಓ ಇಂದ್ರ! ಇಷ್ಟಾದರೂ ಗರಿಕೆಯನ್ನಿಟ್ಟ ತಕ್ಕಡಿಯ ತಟ್ಟೆ ಮೇಲೆ ಬರಲಿಲ್ಲ. ಕುಬೇರನ ಪಟ್ಟಣದ ಶ್ರೀಮಂತಿಕೆ ನನಗೆ ಹೆಮ್ಮೆಯ ಸಂಗತಿಯಾಗಿತ್ತು. ಆದರೆ ಈ ಗರಿಕೆಯ ಮುಂದೆ ಅದೆಲ್ಲ ಕ್ಷುದ್ರವಾಯಿತು. ನನ್ನ ಅಹಂಕಾರ ಮುರಿದುಹೋಯಿತು. ಅಮ್ಮಾ, ಋಷಿಗಳಿಗೆ ಇದು ಎಲ್ಲಿಂದ ಸಿಕ್ಕಿತು, ಹೇಳಿ?


12
ಈ ಗರಿಕೆಯಿಂದ ಗಣೇಶನ ಪೂಜೆ ಮಾಡಿದ್ದರು. ಅನೇಕ ಸುಗಂಧಭರಿತ ಹೂಗಳಿದ್ದರೂ, ಈ ಹುಲ್ಲನ್ನು ಅದೇಕೆ ಪೂಜೆಗೆ ಉಪಯೋಗಿಸಿದರೋ ಎಂದು ನಾನು ಆಶ್ಚರ್ಯಪಟ್ಟಿದ್ದೆ. ಋಷಿಗಳು ನನ್ನ ಮೇಲೆ ಕೃಪೆ ತೋರಿ ಗರಿಕೆಯ ಮಹತ್ವವನ್ನು ತೋರಿಸಿಕೊಟ್ಟರು.
ನನ್ನ ಸಂಪತ್ತಿಗೆ ಎಣೆಯಿಲ್ಲವೆಂದು ನಾನು ಜಂಭಪಟ್ಟಿದ್ದೆ. ಈಗ ನನ್ನ ಕಣ್ಣು ತೆರೆಯಿತು.

13




14 ಅವರೆಲ್ಲರೂ ಶಿವನನ್ನು ಪ್ರಾರ್ಥಿಸಿದರು. ಶಿವ ಅವರ ಮುಂದೆ ಪ್ರತ್ಯಕ್ಷನಾದ.




15 ಕುಬೇರ, ಇಂದ್ರ ಹಾಗೂ ಋಷಿಪತ್ನಿ ಎಲ್ಲರೂ ಭಗವಾನ್ ಗಣೇಶನನ್ನು ಪ್ರಾರ್ಥಿಸಿದರು. ಗಣೇಶ ಅವರ ಮುಂದೆ ಕಾಣಿಸಿಕೊಂಡ.




16



ಭಗವಂತ ನಿಮ್ಮನ್ನು ಎಂದೆಂದಿಗೂ ಅನುಗ್ರಹಿಸಲಿ. ಪ್ರಪಂಚವೆಂಬ ಈ ಬಹುದೊಡ್ಡ ಬೂಟಾಟಿಕೆಯಿಂದ ಬಹುದೂರ ನಿಮ್ಮನ್ನು ಕರೆದೊಯ್ಯಲಿ! ಪ್ರಪಂಚವೆಂಬ ಮಾಯೆಗೆ ನೀವೆಂದಿಗೂ ಮರುಳಾಗದೆ ಇರುವಂತಾಗಲಿ. ಶಂಕರನು ನಿಮಗೆ ಸಹಾಯಕನಾಗಿರಲಿ. ಉಮೆಯು ನಿಮಗೆ ಸತ್ಯದ ಬಾಗಿಲನ್ನು ತೆರೆದು ನಿಮ್ಮೆಲ್ಲ ಭ್ರಮೆಗಳನ್ನೂ ನಿವಾರಿಸಲಿ.

**-ಸ್ವಾಮಿ ವಿವೇಕಾನಂದ**

# ಬೆಂಗಳೂರು ರಾಮಕೃಷ್ಣ ಮಠದಲ್ಲಿ ವಾರ್ಷಿಕೋತ್ಸವ ಮತ್ತು 'Voice of Vivekananda' ಮೊಬೈಲ್ ಆ್ಯಪ್‌ನ ಬಿಡುಗಡೆ

ಬೆಂಗಳೂರು ರಾಮಕೃಷ್ಣ ಮಠದಲ್ಲಿ ಶ್ರೀರಾಮಕೃಷ್ಣ, ಶ್ರೀಮಾತೆ ಶಾರದಾದೇವಿ ಹಾಗೂ ಸ್ವಾಮಿ ವಿವೇಕಾನಂದರ ಜಯಂತಿ ಆಚರಣೆಯ ಅಂಗವಾಗಿ ನಡೆದ ಸಾರ್ವಜನಿಕ ವಾರ್ಷಿಕೋತ್ಸವವು ಈ ಬಾರಿ ವಿವಿಧ ಉಪನ್ಯಾಸಗಳು ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳೊಂದಿಗೆ ನೆರವೇರಿತು. ಇದರ ಅಂಗವಾಗಿ ವಿಶೇಷ ರಿಯಾಯಿತಿಗಳೊಂದಿಗೆ ಪುಸ್ತಕ ಪ್ರದರ್ಶನ ಹಾಗೂ ಮಾರಾಟದ ವ್ಯವಸ್ಥೆ ಮಾಡಲಾಗಿದ್ದು, ಡಿಸೆಂಬರ್ ೨೫ ರಿಂದ ಜನವರಿ ೧೨ರ ವರೆಗೆ ಮಠದ ಪ್ರವೇಶದ್ವಾರದ ಬಳಿ ಈ ಪ್ರದರ್ಶನ ನಡೆಯಿತು. ಕಲ್ಕತ್ತೆಯ ದಕ್ಷಿಣೇಶ್ವರದ ಭವ್ಯವಾದ ಕಾಳೀಮಂದಿರದ ಪ್ರತಿಕೃತಿಯನ್ನು ಪುಸ್ತಕ ಪ್ರದರ್ಶನದ ಪ್ರವೇಶ ದ್ವಾರದಲ್ಲಿ ನಿಲ್ಲಿಸಲಾಗಿದ್ದು, ಮಧ್ಯದಲ್ಲಿ ಕಾಳೀ ವಿಗ್ರಹವನ್ನು ಸ್ಥಾಪನೆ ಮಾಡಿದ್ದು ಈ ಬಾರಿಯ ವಿಶೇಷ.

೨೦೧೫ರ ಜನವರಿ ೧ರಂದು ಕಲ್ಪತರು ದಿನಾಚರಣೆಯ ಸಂದರ್ಭದಲ್ಲಿ, ವಾರ್ಷಿಕೋತ್ಸವದ ಅಂಗವಾಗಿ 'Voice of Vivekananda' ಎಂಬ ಮೊಬೈಲ್ ಆ್ಯಪ್ ಅನ್ನು ಜೈನ್ ಗ್ರೂಪ್ ಸಂಸ್ಥೆಗಳ ಮುಖ್ಯಸ್ಥರಾದ ಡಾ. ಚೆನ್‌ರಾಜ್ ರಾಯ್‌ಚಂದ್ ಅವರು



ಬಿಡುಗಡೆ ಮಾಡಿದರು. ಶ್ರೀ ಸುಹಾಸ್ ಗೋಪಿನಾಥ್ ವಿಶೇಷ ಅತಿಥಿಯಾಗಿದ್ದರು. ಸ್ವಾಮಿ ವಿವೇಕಾನಂದರ ಸಂದೇಶ, ಚಿತ್ರಗಳು ಹಾಗೂ ವಿವಿಧ ವಿಷಯಗಳಿಗೆ ಸಂಬಂಧಿಸಿದ ಸ್ವಾಮೀಜಿ ನುಡಿಗಳ ವಾಚನವನ್ನು ಒಳಗೊಂಡ ಆ್ಯಪ್ ಅನ್ನು ಸದ್ಯ ಅಂಡ್ರಾಯ್ಡ್‌ಗಾಗಿ ತಯಾರಿಸಲಾಗಿದೆ. ಇದು ಗೂಗಲ್ ಪ್ಲೇ ಸ್ಟೋರ್‌ನಲ್ಲಿ ಉಚಿತವಾಗಿ ಲಭ್ಯವಿದೆ. (ಉಚಿತವಾಗಿ ಪಡೆಯಲು ಲಿಂಕ್: http://market.android.com/details?id=com.rkblr.viveka) *

# ಬಳ್ಳಾರಿ ರಾಮಕೃಷ್ಣ ವಿವೇಕಾನಂದ ಕೇಂದ್ರದಲ್ಲಿ ಸ್ವರ್ಣ ಮಹೋತ್ಸವ




ಬಳ್ಳಾರಿ ಶ್ರೀರಾಮಕೃಷ್ಣ ವಿವೇಕಾನಂದ ಕೇಂದ್ರವು ತನ್ನ "**ಸ್ವರ್ಣ ಮಹೋತ್ಸವ**" ವನ್ನು ೨೦೧೪ರ ಡಿಸೆಂಬರ್ ೬, ೭ ಮತ್ತು ೮ ರಂದು ಆಚರಿಸಿತು. ಮೂರು ದಿನಗಳ ಈ ಸಮಾರಂಭವನ್ನು ನಗರದ 'ಬಸವ ಭವನ' ದಲ್ಲಿ ಆಯೋಜಿಸಲಾಗಿತ್ತು.

ದಿನಾಂಕ ೬ರಂದು ಕಾರ್ಯಕ್ರಮದ ಉದ್ಘಾಟನೆ ನಡೆಯಿತು. ದಿವ್ಯಸಾನ್ನಿಧ್ಯ ವಹಿಸಿದ ತುಮಕೂರು ಹಿರೇಮಠದ ಅಧ್ಯಕ್ಷರಾದ ಪೂಜ್ಯ ಶ್ರೀ ಷ.ಬ್ರ. ಡಾ.ಶಿವಾನಂದ ಶಿವಾಚಾರ್ಯ ಸ್ವಾಮಿಗಳು ಜ್ಯೋತಿ ಬೆಳಗುವ ಮೂಲಕ ಉದ್ಘಾಟನೆ ಯನ್ನು ನೆರವೇರಿಸಿ ಮಾತನಾಡಿದರು. ಸ್ವಾಮಿ ಮುಕ್ತಿದಾನಂದಜಿ ವಿಶೇಷ ಭಾಷಣ ಮಾಡಿದರು. ಅನಂತರ ನಡೆದ ಮೊದಲ '**ಯುವ ಸಮಾವೇಶ**'ದಲ್ಲಿ ಸ್ವಾಮಿ ವೀರೇಶಾನಂದ ಸರಸ್ವತಿ, ಡಾ. ವಿ.ಬಿ.ಆರತಿ ವಿಶೇಷ ಉಪನ್ಯಾಸ ನೀಡಿದರು. ಸ್ವಾಮಿ ಶಾಂತಿಮಯಾನಂದಜಿ ಸಮಾವೇಶದ ಅಧ್ಯಕ್ಷತೆ ವಹಿಸಿದ್ದರು. ಸಂಜೆ ನಗರದಲ್ಲಿ ವರ್ಣಮಯವಾದ '**ಶೋಭಾಯಾತ್ರೆ**' ನಡೆಯಿತು. ಅನಂತರ ಶ್ರೀ ಚಕ್ರವರ್ತಿ ಸೂಲಿಬೆಲೆಯವರು '**ಸ್ವಾಮಿ ವಿವೇಕಾನಂದರ ದೃಷ್ಟಿಯಲ್ಲಿ ನವ ಭಾರತದ ನಿರ್ಮಾಣ**' ಎಂಬ ವಿಶೇಷ ಉಪನ್ಯಾಸ ನೀಡಿದರು. ಸಂಜೆ ೭ ರಿಂದ ಸ್ವಾಮಿ ವಿವೇಕಾನಂದರ ಸಂದೇಶವನ್ನು ಆಧರಿಸಿದ ನಾಟಕ "**ಕರೆಯುತಿದೆ ಯುಗವಾಣಿ**"ಯನ್ನು ಶ್ರೀ ಮಂಡ್ಯ ರಮೇಶ್ ಅವರ ನೇತೃತ್ವದಲ್ಲಿ **ನಟನ**, ಮೈಸೂರು – ಇವರು ಪ್ರಸ್ತುತಪಡಿಸಿದರು.

ದಿನಾಂಕ ೭ ರಂದು "**ಶಿಕ್ಷಕರ ಸಮಾವೇಶ**" ನಡೆಯಿತು. ಮೂರು ಅಧಿವೇಶನಗಳು ಹಾಗೂ ಶ್ರೀ ಗುರುರಾಜ ಕರಜಗಿಯವರ '**ಮಂಕುತಿಮ್ಮನ ಕಗ್ಗ**' – ವಿಶೇಷ ಉಪನ್ಯಾಸ, ಸಾಂಸ್ಕೃತಿಕ ಕಾರ್ಯಕ್ರಮದ ಅಂಗವಾಗಿ '**ವಿವೇಕ ಸಂಗೀತ**' (ಬೆಂಗಳೂರಿನ ಶ್ರೀ ಪ್ರವೀಣ್ ಡಿ.ರಾವ್ ಹಾಗೂ ಸಂಗಡಿಗರಿಂದ) ನಡೆಯಿತು. ರಾಮಕೃಷ್ಣ ಮಹಾಸಂಘದ ಸಂನ್ಯಾಸಿಗಳು, ನಾಡಿನ ಪ್ರಸಿದ್ಧ ಚಿಂತಕರು ಅಧಿವೇಶನಗಳನ್ನು ನೆರವೇರಿಸಿಕೊಟ್ಟರು.

ದಿನಾಂಕ ೮ ರಂದು "**ಭಕ್ತ ಸಮಾವೇಶ**" ನಡೆಯಿತು. ಇದರ ಅಂಗವಾಗಿ ನಡೆದ ಮೂರು ಅಧಿವೇಶನಗಳಲ್ಲಿ 'ದಿವ್ಯತ್ರಯರ ಸಂದೇಶ', 'ಆಧ್ಯಾತ್ಮಿಕ ಪರಿವರ್ತನೆ', 'ಶ್ರೀಮಾತೆ ಶಾರದಾದೇವಿ'ಎಂಬ ವಿಷಯಗಳನ್ನು ಕುರಿತಂತೆ ವಿವಿಧ ಉಪನ್ಯಾಸಗಳು ನಡೆದವು. ಸಾಯಂಕಾಲ ನಡೆದ ಮುಕ್ತಾಯ ಸಮಾರಂಭದಲ್ಲಿ '**ನವಚೇತನ**' ಎಂಬ ಸ್ಮರಣಸಂಚಿಕೆಯನ್ನು ಬಿಡುಗಡೆ ಮಾಡಲಾಯಿತು. ಸಭಾ ಕಾರ್ಯಕ್ರಮದಲ್ಲಿ ರಾಮಕೃಷ್ಣ ಮಠ ಮತ್ತು ಮಿಷನ್ನಿನ ಸಹಾಯಕ ಕಾರ್ಯದರ್ಶಿಗಳಾದ ಪೂಜ್ಯ ಸ್ವಾಮಿ ಬಲಭದ್ರಾನಂದಜಿ ಮಹಾರಾಜ್, ಸ್ವಾಮಿ ಹೃದಾನಂದಜಿ, ಸ್ವಾಮಿ ಮುಕ್ತಿದಾನಂದಜಿ ಭಾಗವಹಿಸಿದ್ದರು. ಬಳಿಕ ನಡೆದ ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಶ್ರೀ ಇಬ್ರಾಹಿಂ ಸುತಾರ್ ಹಾಗೂ ಸಂಗಡಿಗರಿಂದ '**ಆಧ್ಯಾತ್ಮಿಕ ಸಂವಾದ ತರಂಗಿಣಿ**' ನಡೆಯಿತು. ಕಾರ್ಯಕ್ರಮದಲ್ಲಿ ಬಳ್ಳಾರಿ ರಾಮಕೃಷ್ಣ ವಿವೇಕಾನಂದ ಕೇಂದ್ರದಲ್ಲಿ ವಿಶೇಷ ಸೇವೆ ಸಲ್ಲಿಸಿದ ಗಣ್ಯರನ್ನು ಸನ್ಮಾನಿಸಲಾಯಿತು. *

## ಸ್ವಾಮಿ ವೀರೇಶ್ವರಾನಂದಜಿಯವರ ಜೀವನ, ಸ್ಮೃತಿ ಗ್ರಂಥಗಳ ಬಿಡುಗಡೆ



ರಾಮಕೃಷ್ಣ ಮಹಾಸಂಘದ ಹತ್ತನೇ ಪರಮಾಧ್ಯಕ್ಷರಾಗಿದ್ದ ಶ್ರೀಮತ್ ಸ್ವಾಮಿ ವೀರೇಶ್ವರಾನಂದಜಿ ಮಹಾರಾಜ್ ಅವರ ಜೀವನ, ಸ್ಮತಿಚಿತ್ರ ಹಾಗೂ ಛಾಯಾಚಿತ್ರಗಳ ಸಂಕಲನವನ್ನೊಳಗೊಂಡ ಎರಡು ಪ್ರಮುಖ ಗ್ರಂಥಗಳ ಬಿಡುಗಡೆ ಹಾಗೂ ಕಾರ್ಯಕ್ರಮ ಮೈಸೂರು ಶ್ರೀರಾಮಕೃಷ್ಣ ಆಶ್ರಮದಲ್ಲಿ ೨೦೧೪ರ ಡಿಸೆಂಬರ್ ೧೪ರಂದು ನಡೆಯಿತು. 'Swami Vireshwarananda – A Divine Life' ಎಂಬ ಎರಡು ಸಂಪುಟಗಳ ಗ್ರಂಥವನ್ನು ಆಶ್ರಮದ ಹಿಂದಿನ ಅಧ್ಯಕ್ಷರಾಗಿದ್ದ ಪೂಜ್ಯ ಸ್ವಾಮಿ ಸುರೇಶಾನಂದಜಿಯವರು ನೆರವೇರಿಸಿದರು. ಇನ್ನೊಂದು ಗ್ರಂಥ 'Swami Vireshwarananda – A Biography and Picture' ಎಂಬ ಛಾಯಾಚಿತ್ರ - ಜೀವನ ಚಿತ್ರಗಳ ಸಂಪುಟವನ್ನು ಊಟಿ ರಾಮಕೃಷ್ಣಮಠದ ಅಧ್ಯಕ್ಷರಾದ ಪೂಜ್ಯ ಸ್ವಾಮಿ ರಾಘವೇಶಾನಂದಜಿ ಮಹಾರಾಜ್ ನೆರವೇರಿಸಿದರು. ಆರಂಭದಲ್ಲಿ ಈ ಎರಡು ಗ್ರಂಥಗಳ ಬಗ್ಗೆ ಪ್ರಾಸ್ತಾವಿಕ ನುಡಿಗಳನ್ನು ಮಂಡಿಸಿದ 'ಉದ್ಬೋಧನ ' ಬಂಗಾಳಿ ಮಾಸಪತ್ರಿಕೆಯ ಸಂಪಾದಕರಾದ ಸ್ವಾಮಿ ಚೈತನ್ಯಾನಂದಜಿ ಹಾಗೂ 'ವೀರೇಶ್ವರಾನಂದಜೀ ಸ್ಮೃತಿ ಕಮಿಟಿ'ಯ ಕಾರ್ಯದರ್ಶಿಯಾದ ಶ್ರೀ ರತನ್ ಚೌಧುರಿಯವರು ಈ ಕೃತಿಗಳು ಹೊರಬಂದ ಹಿನ್ನೆಲೆ, ಕೃತಿಗಳ ಮಹತ್ವವನ್ನು ಕುರಿತು ಮಾತನಾಡಿದರು. ಇದರೊಂದಿಗೆ ಸ್ವಾಮಿ ವೀರೇಶ್ವರಾನಂದರ ಕೃತಿ 'ಧರ್ಮಜೀವನ'ದ ಕನ್ನಡ ಅವತರಣಿಕೆಯ ಬಿಡುಗಡೆ ಮಾಡಲಾಯಿತು. ಪುಸ್ತಕ ಬಿಡುಗಡೆಯ ನಂತರ ಸ್ವಾಮಿ ವೀರೇಶ್ವರಾನಂದಜಿಯವರ ಶಿಷ್ಯಂದಿರು ಹಾಗೂ ಅವರ ನಿಕಟ ಪರಿಚಯ ಹೊಂದಿದ್ದ ಭಕ್ತರು ತಮ್ಮ ಸವಿನೆನಪುಗಳನ್ನು ಹಂಚಿಕೊಂಡರು. ಸ್ವಾಮಿ ಮಹೇಶಾತ್ಮಾನಂದಜಿ, ಶ್ರೀ ಆರ್ಮುಗಂ, ಶ್ರೀಮತಿ ಮಂಗಳಮ್ಮ, ಶ್ರೀ ಕೀರ್ತಿಕುಮಾರ್, ಡಾ.ಗೌರೀಶಂಕರ ಪ್ರಭು ಮೊದಲಾದವರು ಸವಿನೆನಪು ಭಾಷಣ ಮಾಡಿದರು. ಸಭಾಕಾರ್ಯಕ್ರಮದ ನಂತರ ಸ್ವಾಮಿ ವೀರೇಶ್ವರಾನಂದಜಿಯವರನ್ನು ಕುರಿತ ''ಕಿರು ಚಲನಚಿತ್ರ'' ಪ್ರದರ್ಶನ ಹಾಗೂ ಪ್ರಸಾದ ವಿತರಣೆ ನಡೆಯಿತು. *

## ರಾಮಕೃಷ್ಣ ವಿವೇಕಾನಂದ ಭಾವಪ್ರಚಾರ ಪರಿಷತ್, ಕರ್ನಾಟಕ
### ಪ್ರಥಮ ವಾರ್ಷಿಕ ಸಮ್ಮೇಳನ - ಡಿಸೆಂಬರ್ 14, 15 ಮತ್ತು 16, 2014



ತುಮಕೂರು ರಾಮಕೃಷ್ಣ- ವಿವೇಕಾನಂದ ಆಶ್ರಮದಲ್ಲಿ ನಡೆದ ಕರ್ನಾಟಕ ಭಾವ ಪ್ರಚಾರ ಪರಿಷತ್ತಿನ ಪ್ರಥಮ ವಾರ್ಷಿಕ ಸಮ್ಮೇಳನವನ್ನು ಭಾರತದ ಸರ್ವೋಚ್ಚ ನ್ಯಾಯಾಲಯದ ನಿವೃತ್ತ ಮುಖ್ಯ ನ್ಯಾಯಾಧೀಶರಾದ ಪದ್ಮವಿಭೂಷಣ ಡಾ. ಎಂ.ಎನ್. ವೆಂಕಟಾಚಲಯ್ಯನವರು ಉದ್ಘಾಟಿಸಿ, 'ಭಾವಾಂತರಂಗ' ಸ್ಮರಣಸಂಚಿಕೆಯನ್ನು ಲೋಕಾರ್ಪಣೆ ಮಾಡಿದರು. ಮುಖ್ಯ ಅತಿಥಿಗಳಾಗಿದ್ದ ರಾಮಕೃಷ್ಣ ಮಹಾಸಂಘದ ಟ್ರಸ್ಟಿಗಳಾದ ಸ್ವಾಮಿ ಅಭಿರಾಮಾನಂದಜೀ ಮಹಾರಾಜ್, 'ದಿವ್ಯತ್ರಯರ ಸಂದೇಶಗಳ ಪ್ರಚಾರ ಕಾರ್ಯದಲ್ಲಿ ಭಕ್ತಜನರ ಪಾಲ್ಗೊಳ್ಳುವಿಕೆಯು ಅತ್ಯಂತ ಮುಖ್ಯ' ಎಂದು ತಿಳಿಸಿದರು. ದಿವ್ಯ ನೇತೃತ್ವ ವಹಿಸಿದ್ದ ಬೆಂಗಳೂರು ಬಸವನಗುಡಿಯ ರಾಮಕೃಷ್ಣ ಮಠದ ಅಧ್ಯಕ್ಷರಾದ ಸ್ವಾಮಿ ಹರ್ಷಾನಂದಜೀ ಮಹಾರಾಜ್ ಮಾತನಾಡಿ, 'ಭಾವಪ್ರಚಾರ ಪರಿಷತ್ ನಿಃಸ್ವಾರ್ಥ ಸೇವಾಕಾರ್ಯಗಳ ಮೂಲಕ ಶ್ರಮಿಸಿ ಸಮಾಜದ ಮತ್ತು ವೈಯಕ್ತಿಕ ಅಭ್ಯುದಯಕ್ಕೆ ಕಾರಣವಾಗಬೇಕು' ಎಂದರು.

ಡಿಸೆಂಬರ್ ೧೪ರಂದು ನಡೆದ **'ಶ್ರೀರಾಮಕೃಷ್ಣ ಸ್ಮರಣೋತ್ಸವ'**ದಲ್ಲಿ ಗದಗ ರಾಮಕೃಷ್ಣ ವಿವೇಕಾನಂದ ಆಶ್ರಮದ ಸ್ವಾಮಿ ನಿರ್ಭಯಾನಂದ ಸರಸ್ವತೀ, ಬೆಂಗಳೂರು ರಾಮಕೃಷ್ಣ ಮಠದ ಸ್ವಾಮಿ ಮಂಗಳನಾಥಾನಂದಜೀ, ಮೈಸೂರು ಶ್ರೀರಾಮಕೃಷ್ಣ ವಿದ್ಯಾಶಾಲೆಯ ಸ್ವಾಮಿ ಯುಕ್ತೇಶಾನಂದಜೀ ಮತ್ತು ಬೆಂಗಳೂರಿನ ಡಾ. ಎಚ್.ಎನ್. ಮುರಳೀಧರ ಉಪನ್ಯಾಸ ನೀಡಿದರು. ಅಂದು ಸಂಜೆ ಪ್ರೊ. ಎಂ. ವೆಂಕಟೇಶ್ ಕುಮಾರ್ ಅವರು **'ಭಜನ ಸಂಧ್ಯಾ'** ಸಾಂಸ್ಕೃತಿಕ ಕಾರ್ಯಕ್ರಮವನ್ನು ನೆರವೇರಿಸಿಕೊಟ್ಟರು.

ಡಿಸೆಂಬರ್ ೧೫ರಂದು **'ಶ್ರೀಶಾರದಾ ದೇವಿ ಸ್ಮರಣೋತ್ಸವ'**ದಲ್ಲಿ ಸ್ವಾಮಿ ಅಭಿರಾಮಾನಂದಜೀ, ಸ್ವಾಮಿ ಜಿತಕಾಮಾನಂದಜೀ, ಸ್ವಾಮಿ ಬೋಧಸ್ವರೂಪಾನಂದಜೀ, ಸ್ವಾಮಿ ನಿರ್ಭಯಾನಂದ ಸರಸ್ವತೀ, ಮಾತಾಜಿ ಯೋಗಾನಂದಮಯೀ, ಮಾತಾಜಿ ಪ್ರಬೋಧಮಯೀ ಮತ್ತು ಮಾತಾಜಿ ವಿವೇಕಮಯೀ ಮಾತನಾಡಿದರು. ಅಂದು ಸಂಜೆ ಇಂಗ್ಲೆಂಡಿನ ಶ್ರೀಮತಿ ಡಾ.ಜ್ಯೋತ್ಸ್ನಾ ಶ್ರೀಕಾಂತ್ **'ನಾದತರಂಗ'** ಸಾಂಸ್ಕೃತಿಕ ಕಾರ್ಯಕ್ರಮವನ್ನು ನೆರವೇರಿಸಿಕೊಟ್ಟರು.

ಡಿಸೆಂಬರ್ ೧೬ರಂದು **'ಸ್ವಾಮಿ ವಿವೇಕಾನಂದ ಸ್ಮರಣೋತ್ಸವ'**ದಲ್ಲಿ ಸ್ವಾಮಿ ವೀರೇಶಾನಂದ ಸರಸ್ವತೀ, ಸ್ವಾಮಿ ಪ್ರಕಶಾನಂದಜೀ ಮತ್ತು ಡಾ.ಡಬ್ಲ್ಯೂ.ಪಿ. ಕೃಷ್ಣ ಅವರು ಉಪನ್ಯಾಸ ನೀಡಿದರು.

**'ಸ್ವಾಮಿ ವಿವೇಕಾನಂದ ಯುವ ಸಮ್ಮೇಳನ'** ವನ್ನು ಉದ್ಘಾಟಿಸಿದ ಪದ್ಮಭೂಷಣ ಡಾ.ಯು.ಆರ್.ರಾವ್ ಮಾತನಾಡಿ, ಸ್ವಾಮಿ ವಿವೇಕಾನಂದರ ವೈಜ್ಞಾನಿಕ ಮನೋಧರ್ಮವನ್ನು ಶ್ಲಾಘಿಸಿದರು. ಕಾರ್ಯಕ್ರಮದಲ್ಲಿ ಸ್ವಾಮಿ ನಿರ್ಭಯಾನಂದ ಸರಸ್ವತೀ, ಸ್ವಾಮಿ ವೀರಭದ್ರಾನಂದಜೀ ಮಹಾರಾಜ್ ಮತ್ತು ಶ್ರೀ ಚಕ್ರವರ್ತಿ ಸೂಲಿಬೆಲೆ ರವರು ಉಪನ್ಯಾಸ ನೀಡಿದರು. ಕಾರ್ಯಕ್ರಮದಲ್ಲಿ ಸುಮಾರು ೨೦೦೦ ಕಾಲೇಜು ವಿದ್ಯಾರ್ಥಿಗಳು ಭಾಗವಹಿಸಿದ್ದರು.

ಪ್ರಥಮ ವಾರ್ಷಿಕ ಸಮ್ಮೇಳನದ ಸಮಾರೋಪ ಸಮಾ ರಂಭದಲ್ಲಿ ರಾಮಕೃಷ್ಣ ಮಹಾಸಂಘದ ಟ್ರಸ್ಟಿಗಳಾದ ಸ್ವಾಮಿ ಮುಕ್ತಿದಾನಂದಜೀ ಮಹಾರಾಜ್ ಮಾತನಾಡಿ, ಸಮ್ಮೇಳನದ ಯಶಸ್ವೀ ನಿರ್ವಹಣೆಯನ್ನು ಮುಕ್ತ ಕಂಠದಿಂದ ಶ್ಲಾಘಿಸಿದರು. *

# ರಾಮಕೃಷ್ಣ ಮಿಷನ್ ಆಡಳಿತ ಮಂಡಳಿಯ ಸಂಕ್ಷಿಪ್ತ ವಾರ್ಷಿಕ ವರದಿ : ೨೦೧೩-೧೪

ರಾಮಕೃಷ್ಣ ಮಿಷನ್ ಆಡಳಿತ ಮಂಡಳಿಯ ೧೦೫ನೇ ವಾರ್ಷಿಕ ಸರ್ವಸದಸ್ಯರ ಸಭೆಯು ೨೦೧೪ರ ಡಿಸೆಂಬರ್ ೨೧, ಭಾನುವಾರದಂದು ಮಧ್ಯಾಹ್ನ ೩.೩೦ಕ್ಕೆ ಬೇಲೂರು ಮಠದಲ್ಲಿ ಜರಗಿತು.

**ಸಮಾಜ ಸೇವಕ ಶಿಕ್ಷಣ ಮಂದಿರ** ವು (ಶಾರದಾ ಪೀಠ, ಬೇಲೂರು ಮಠ) ಭಾರತದಲ್ಲಿ ಮೂರನೇ ಅತ್ಯುತ್ತಮ *'ಗ್ರಾಮೀಣ ಸ್ವ-ಉದ್ಯೋಗ ತರಬೇತಿ ಸಂಸ್ಥೆ'* (RSETI) ಯೆಂದು **ಭಾರತ ಸರ್ಕಾರದ ಗ್ರಾಮೀಣಾಭಿವೃದ್ಧಿ ಸಚಿವಾಲಯ** ಮೌಲ್ಯಮಾಪನ ಮಾಡಿದೆ. 'ಭಾರತ್ ಚೇಂಬರ್ ಆಫ್ ಕಾಮರ್ಸ್' ಸಂಸ್ಥೆಯು **ನರೇಂದ್ರಪುರ**ದ ಆಶ್ರದ *ಲೋಕ ಶಿಕ್ಷಾ ಪರಿಷತ್* ಪರಿಸರ ಅಭಿವೃದ್ಧಿಗೆ ಸಲ್ಲಿಸಿದ ಕೊಡುಗೆಗಾಗಿ *'ಬಿ.ಪಿ.ಪೊದ್ದರ್ ಸಂಸ್ಮರಣಾ ಪ್ರಶಸ್ತಿ'* ಯನ್ನು ನೀಡಿದೆ.

**ಸ್ವಾಮಿ ವಿವೇಕಾನಂದರ ೧೫೦ನೇ ಜಯಂತಿ ಉತ್ಸವ :** ೨೦೧೪ರ ಜನವರಿ ೧೨ ರಂದು **ಭಾರತ ಸರ್ಕಾರದ ಸಂಸ್ಕೃತಿ ಸಚಿವಾಲಯ**ವು ಸ್ವಾಮಿ ವಿವೇಕಾನಂದರ ೧೫೦ನೇ ಜಯಂತಿ ಉತ್ಸವದ ಸಮಾರೋಪ ಸಮಾರಂಭವನ್ನು ನವದೆಹಲಿಯ ವಿಜ್ಞಾನ ಭವನದಲ್ಲಿ ನಡೆಸಿತು. ೨೦೧೪ರ ಜನವರಿ ೧೦ರಂದು **ಪಶ್ಚಿಮ ಬಂಗಾಳ ಸರ್ಕಾರ**ವು ಸ್ವಾಮಿ ವಿವೇಕಾನಂದರ ೧೫೦ನೇ ಜಯಂತಿ ಉತ್ಸವದ ಸಮಾರೋಪವನ್ನು ಕೊಲ್ಕತ್ತದ ಕೆಂಪುಕೋಟೆಯಲ್ಲಿ ನಡೆದ ಸಾರ್ವಜನಿಕ ಕಾರ್ಯಕ್ರಮದೊಂದಿಗೆ ನಡೆಸಿತು. **ತಮಿಳುನಾಡಿ**ನ ಮುಖ್ಯಮಂತ್ರಿಯವರು ರಾಜ್ಯದ ಒಂಬತ್ತು ವಿಶ್ವವಿದ್ಯಾನಿಲಯಗಳಲ್ಲಿ ಸ್ವಾಮಿ ವಿವೇಕಾನಂದರ ಹೆಸರಿನಲ್ಲಿ ಉನ್ನತ ಸಂಶೋಧನ ಹಾಗೂ ಶಿಕ್ಷಣ ಕೇಂದ್ರಗಳನ್ನು ಸ್ಥಾಪಿಸುವುದಾಗಿ ಘೋಷಿಸಿದರು.

೨೦೧೦ರಲ್ಲಿ ದೇಶದ ಹಲವೆಡೆ ಆರಂಭಗೊಂಡ ನಾಲ್ಕು ವರ್ಷಗಳ ಸೇವಾಕಾರ್ಯಗಳು ಕೊನೆಯ ಹಂತವನ್ನು ತಲುಪಿವೆ. ಕೇಂದ್ರ ಸರ್ಕಾರದ ಈ ನೆರವಿನ ಕಾರ್ಯಕ್ರಮಗಳಲ್ಲಿ ೮.೧೦.೨೦೧೦ ರಿಂದ ೩೦.೬.೨೦೧೪ರ ಅವಧಿಯಲ್ಲಿ ೮೩.೫೨ ಕೋಟಿ ಮೊತ್ತವನ್ನು ಖರ್ಚು ಮಾಡಲಾಗಿದೆ.

**ಮಿಷನ್ನಿನ ಹೊಸ ಶಾಖಾಕೇಂದ್ರಗಳು :** ಸೋದರಿ ನಿವೇದಿತಾ ತನ್ನ ಕೊನೆಯುಸಿರನ್ನೆಳೆದ **ದಾರ್ಜಿಲಿಂಗ್**ನ 'ರಾಯ್ ವಿಲ್ಲಾ'ದಲ್ಲಿ ರಾಮಕೃಷ್ಣ ಮಿಷನ್ನಿನ ಹೊಸ ಶಾಖಾಕೇಂದ್ರವನ್ನು ತೆರೆಯಲಾಗಿದೆ. ಬಾಂಗ್ಲಾದೇಶದ **ಚಿತ್ತಗಾಂಗ್** ಆಶ್ರಮದ ಉಪಕೇಂದ್ರವನ್ನು **ಧೋರ್ಲಾ**ದಲ್ಲಿ ತರೆಯಲಾಗಿದೆ.

**ಶೈಕ್ಷಣಿಕ ಕ್ಷೇತ್ರ :** ೧) ವಿವೇಕ ನಗರ (ತ್ರಿಪುರಾ) ಕೇಂದ್ರದ ವೃತ್ತಿ ತರಬೇತಿ ಸಂಸ್ಥೆಯನ್ನು 'ವಾಣಿಜ್ಯ ತರಬೇತಿ ಸಂಸ್ಥೆ' (ITI)ಯಾಗಿ ಉನ್ನತ ದರ್ಜೆಗೇರಿಸಲಾಗಿದೆ. ೨) ಒಡಿಶಾದ ಕೊಠಾರ್ ಕೇಂದ್ರದಲ್ಲಿ 'ಕಂಪ್ಯೂಟರ್ ತರಬೇತಿ ಸಂಸ್ಥೆ' ಆರಂಭ. ೩) ದೆಹಲಿ ಕೇಂದ್ರದಲ್ಲಿ ''Awakening'' – ೫ ಅಂಗಗಳ ನೈತಿಕ ಶಿಕ್ಷಣ ಕಾರ್ಯಕ್ರಮ – ದೆಹಲಿಯ ಸುತ್ತಮುತ್ತಲಿನ ೫೦ CBSE ಶಾಲೆಗಳಲ್ಲಿ. **ವೈದ್ಯಕೀಯ ಕ್ಷೇತ್ರ :** ೧) ಲಕ್ನೋ ಆಶ್ರಮದ ಆಸ್ಪತ್ರೆಯಲ್ಲಿ *Cardiac OT Complex with 5-bet intensive Therapy Unit* ಹಾಗೂ *Advanced Phaco Emulsification Unit, Cablator II Surgery System-ENT, Fiberoptic Bronchoscope* ಗಳ ಆರಂಭ. ೨) ಇಟಾ ನಗರ ಮಿಷನ್ನಿನ ಆಸ್ಪತ್ರೆಯಲ್ಲಿ *Haemodialysis Machine, UGI Video Endoscopy, Phototherapy* ಗಳ ಸೇರ್ಪಡೆ. ೩) ಕೊಲ್ಕತ್ತದ ಸೇವಾ ಪ್ರತಿಷ್ಠಾನದ ಆಸ್ಪತ್ರೆಯಲ್ಲಿ *Swami Vivekananda Diagnostic and Cardiac Care Centre* ಗೆ ಶಿಲಾನ್ಯಾಸ. **ಗ್ರಾಮೀಣಾಭಿವೃದ್ಧಿ ಕ್ಷೇತ್ರ :** ೧) ಜಾರ್ಖಂಡಿನ ರಾಂಚಿ (ಮೊರಬಾದಿ) ಆಶ್ರಮದಲ್ಲಿ IWMP (Integrated Watershed Management Programme) ಯಿಂದ ೧೮೧ *percolation tank* ಗಳ ನಿರ್ಮಾಣ, ೧೨೦ *contour trenching* ಗಳ ನಿರ್ಮಾಣ, ೧೦೫೨ ಮಂದಿ ರೈತರಿಗಾಗಿ ಭತ್ತ, ಗೋಧಿ, ಸಾಸಿವೆ ಹಾಗೂ ಇತರ ಧಾನ್ಯಗಳಿಗಾಗಿ *frontline demostration of crops.* ೨) ನರೇಂದ್ರಪುರ ಕೇಂದ್ರದಿಂದ ಪ.ಬಂಗಾಳದ ೨೪ ಪರಗಣ ಜಿಲ್ಲೆಯ ಗೊಸಬಾ ಹಾಗೂ ಬಂಕುರಾ ಜಿಲ್ಲೆಯ ಮಾಟಗೋದಾದಲ್ಲಿ ಎರಡು ಕಾಲೇಜುಗಳ ಸ್ಥಾಪನೆ.

**ರಾಮಕೃಷ್ಣ ಮಠದ ಹೊಸ ಯೋಜನೆಗಳು :** ೧) ಪುರುಲಿಯಾದ ಬಗಡಾದಲ್ಲಿ ಕಂಪ್ಯೂಟರ್ ತರಬೇತಿ ಕೇಂದ್ರ ೨) ಉತ್ತರಾಖಂಡದ ಮಾಯಾವತಿಯಲ್ಲಿರುವ ಆಸ್ಪತ್ರೆಯಲ್ಲಿ OT ಸಹಿತ ಐದಂತಸ್ತಿನ ಕಟ್ಟಡ. ೩) ಕೂಚ್‌ಬಿಹಾರ್ ಹಾಗೂ ನೌರಾ (ಪ.ಬಂಗಾಳ) ಕೇಂದ್ರಗಳಲ್ಲಿ ಡಿಸ್ಪೆನ್ಸರಿ ಕಟ್ಟಡ. ೪) ಆಂಟ್‌ಪುರ (ಪ.ಬಂಗಾಳ) ಕೇಂದ್ರದಲ್ಲಿ *Operating Microscope* ಹಾಗೂ ಇತರ ನೇತ್ರ ವೈದ್ಯಕೀಯ ಯಂತ್ರಗಳ ವ್ಯವಸ್ಥೆ.

**ವಿದೇಶೀ ಕೇಂದ್ರಗಳಲ್ಲಿನ ಚಟುವಟಿಕೆಗಳು :** ೧) ಸಿಂಗಾಪುರ ಕೇಂದ್ರದ ಶಾರದಾ ಕಿಂಡರ್‌ಗಾರ್ಟನ್‌ಗೆ *ESDA (Early Childhood and Development Agency)* ದ *Outstanding Centre for Teaching and Learning Award 2013* ಹಾಗೂ ಅಲ್ಲಿನ ಪ್ರಾಂಶುಪಾಲರಿಗೆ *ESDA Outstanding Early Childhood Leader Award 2013* ಸಿಂಗಾಪುರ ಶಿಕ್ಷಣ ಸಚಿವಾಲಯ ದಿಂದ ಲಭಿಸಿದೆ. ೨) ಭಾರತ ಸರ್ಕಾರದಿಂದ ಫಿಜಿ ಕೇಂದ್ರಕ್ಕೆ ಅಲ್ಲಿ ಮಾಡಿದ ಸಮಾಜ ಸೇವಾ ಕಾರ್ಯಕ್ಕೆ 'ಪ್ರವಾಸಿ ಭಾರತೀಯ ಸಮ್ಮಾನ್' ಪ್ರಶಸ್ತಿ.

**ಪರಿಹಾರಕಾರ್ಯ :** ರಾಮಕೃಷ್ಣ ಮಠ ಹಾಗೂ ಮಿಷನ್ ಈ ವರ್ಷ ಹಲವೆಡೆ ಪರಿಹಾರ ಕಾರ್ಯ, ಮರುವಸತಿ ನಿರ್ಮಾಣಗಳನ್ನು ಕೈಗೊಂಡಿತು. ಇದಕ್ಕೆ ೧೦.೮೬ ಕೋಟಿ ವೆಚ್ಚ ತಗುಲಿದೆ. ೧.೨೦ಕೋಟಿ ಕುಟುಂಬಗಳಿಗೆ ಸೇರಿದ ೪.೧೫ ಲಕ್ಷ ಮಂದಿ ಇದರ ಉಪಯೋಗ ಪಡೆದಿದ್ದಾರೆ.

**ಇತರ ಸೇವಾಕಾರ್ಯಗಳು:** ಬಡ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ, ವೃದ್ಧ ಹಾಗೂ ರೋಗಪೀಡಿತರಿಗೆ ಆರ್ಥಿಕ ನರವು. ಸು. ೨೮.೯ ಲಕ್ಷ ಮಂದಿ ಇದರ ಉಪಯೋಗ ಪಡೆದಿದ್ದಾರೆ. ಇದಕ್ಕೆ ೧೪.೭೪ ಕೋಟಿ ರೂ.ವೆಚ್ಚ ತಗಲಿದೆ.

**ವೈದ್ಯಕೀಯ ಸೇವೆ :** ೧೫ ಆಸ್ಪತ್ರೆಗಳು, ೧೧೧ ಡಿಸ್ಪೆನ್ಸರಿಗಳು, ೯ ಸಂಚಾರಿ ವಾಹನ ಆಸ್ಪತ್ರೆಗಳು ಹಾಗೂ ೧೨೫೫ ವೈದ್ಯಕೀಯ ಶಿಬಿರಗಳ ಮೂಲಕ ಸು.೮೩ ಲಕ್ಷ ಮಂದಿ ಜನರಿಗೆ ವೈದ್ಯಕೀಯ ಸೇವೆ ಮಾಡಲಾಗಿದೆ. ಇದಕ್ಕೆ ೧೬೬.೭೧ ಕೋಟಿ ರೂ.ವೆಚ್ಚ ತಗಲಿದೆ.

ಸುಮಾರು ೩.೪೫ ಲಕ್ಷ ಮಂದಿ ವಿದ್ಯಾರ್ಥಿಗಳು ನಮ್ಮ ವಿದ್ಯಾಸಂಸ್ಥೆಗಳಲ್ಲಿ ಕಲಿಯುತ್ತಿದ್ದಾರೆ. ಶಿಶುವಿಹಾರಗಳಿಂದ ಆರಂಭಿಸಿ ವಿಶ್ವವಿದ್ಯಾಲಯಗಳ ತನಕ ವಿವಿಧ ಶೈಕ್ಷಣಿಕ ಚಟುವಟಿಕೆಗಳು ನಡೆಯುತ್ತಿವೆ. ಸುಮಾರು ೨೬೬.೫೦ ಕೋಟಿ ಮೊತ್ತದ ಹಣ ಇದಕ್ಕೆ ತಗಲಿದೆ.

ಹಲವು ಗ್ರಾಮೀಣ ಹಾಗೂ ಬುಡಕಟ್ಟು ಅಭಿವೃದ್ಧಿಯ ಯೋಜನೆಗಳನ್ನು ಹಾಕಿಕೊಳ್ಳಲಾಗಿದೆ. ಇದಕ್ಕೆ ೫೨.೪೫ ಕೋಟಿ ವೆಚ್ಚ ತಗಲಿದೆ. ಸುಮಾರು ೩೦.೭೩ ಲಕ್ಷ ಗ್ರಾಮೀಣ ಮಂದಿ ಇದರ ಉಪಯೋಗ ಪಡೆದಿದ್ದಾರೆ.

ಈ ಸಂದರ್ಭದಲ್ಲಿ ನಮ್ಮ ಸದಸ್ಯರಿಗೂ, ಹಿತೈಷಿಗಳಿಗೂ ಅವರ ಸಹಕಾರ ಹಾಗೂ ನರೆವಿಗಾಗಿ ನಮ್ಮ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

೨೧ ಡಿಸೆಂಬರ್, ೨೦೧೪

*ಸ್ವಾಮಿ ಸುಹಿತಾನಂದ*

ಪ್ರಧಾನ ಕಾರ್ಯದರ್ಶಿಗಳು

Managing Editor : Swami Muktidananda Editor : Swami Jnanayogananda
Printed and Published by Swami Muktidananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.C-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

# Mt. Kailash & Manasa Sarovar Yatra

Avail subsidy of
*Rs. 30,000/-

Pay in full before
Jan 28, 2015
Rs.*92,000/-

Early

Discount

Pay in full before
Feb 26, 2015
Rs.*94,000/-

* 347 USD not included
Rates are Ex Kathmandu




## 14 Days Yatra - Depr. Dates

May 14, 23 June 05, 18, 27
July 04 Aug 06, 15, 24



## Optional : 4 Days

Mukthinath with Pokhara
Jomsom, Manokamana



## Highlights

| | | | | |
|---|---|---|---|---|
| Doctor / Nurse in the Group | Experience of over a decade | Most percentage of satisfied customers | Vegetarian Food | Homa & Pooja facilities at Manasa Sarovar |
| | Avail Rs. 30,000/- subsidy from Karnataka Govt. (Karnataka Citizens only) | Briefing Session at Bangalore | Bangalore Staff will accompany | Assistance in availing Travel Insurance |



# Shri Hansaa Travels

**Recognised by Department of Tourism, Govt. of Karnataka**

# 640, 40th Cross, 8th Block, Jayanagar, Bangalore - 70
☎: 080-26543891 / 26643276 / 0-9341215612 / 9341415612
: hansaatravels@gmail.com : hansaatravels.com

VIVEKA PRABHA (KANNADA MONTHLY)
February 2015, Vol.16, No.02, No. of pages : 44

Registered With Registrar of News Papers Of India under 72356/2000.postal Regn.No.KA/SK/MYS/480/2015-17. LICENCED TO POST W.P.P.AT YADAVAGIRI MYSORE 570 020,VIDE LICENCE NO.SK/WPP/MYS/155/2013-15



Printed at mayur graphics,Bangalore